# ದೀರ್ಘಾಯುಷ್ಯದ ರಹಸ್ಯ



ಲೇಖಕರು :

ವಿದ್ವಾನ್ ರಾಮ ವಿಟ್ಠಲಾಚಾರ್ಯರು

ಅಧ್ಯಾಪಕರು, ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು - 560 028

ಪ್ರಕಾಶಕರು:

ಅಖಿಲ ಭಾರತ ಮಾಧ್ವ ಮಹಾ ಮಂಡಲ (ರಿ)

ಪಬ್ಲಿಕೇಶನ್ ಟ್ರಸ್ಟ್, ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು - 560 028

**Deergayushya Rahasya**
Written by **Sri Ramavittalacharya**
Asst. Prof. Poornaprajna Vidyapeetha, Bangalore-28
Published by Akhila Bharata Madhwa Maha Mandala
Publication Trust (R.), Bangalore - 560 028

**ದೀರ್ಘಾಯುಷ್ಯರಹಸ್ಯ**

**ಲೇಖಕರು : ಶ್ರೀರಾಮವಿಟ್ಠಲಾಚಾರ್ಯ**

ಅಧ್ಯಾಪಕರು, ಪೂರ್ಣಪ್ರಜ್ಞವಿದ್ಯಾಪೀಠ



ಪುಟಗಳು : 254

**ಮುದ್ರಿತ ಪ್ರತಿಗಳು : 1000**

ಪ್ರಕಾಶಕರು :

**ಅಖಿಲ ಭಾರತ ಮಾಧ್ವಮಹಾಮಂಡಲ ಪಬ್ಲಿಕೇಷನ್ ಟ್ರಸ್ಟ್ (ರಿ.)**

**ಪೂರ್ಣಪ್ರಜ್ಞವಿದ್ಯಾಪೀಠ, ಬೆಂಗಳೂರು-560 028**

ಅಕ್ಷರ ಜೋಡಣೆ : ಪ್ರೇಮ್‌ಕುಮಾರ್

ಗ್ರಂಥಗಳು ದೊರೆಯುವ ಸ್ಥಳ :

**ಅಖಿಲ ಭಾರತ ಮಾಧ್ವಮಹಾಮಂಡಲ, ಉಡುಪಿ**

ಪೂರ್ಣಪ್ರಜ್ಞವಿದ್ಯಾಪೀಠ, ಕತ್ತರಿಗುಪ್ಪ ಮುಖ್ಯರಸ್ತೆ

ಬೆಂಗಳೂರು- 560 028. ದೂರವಾಣಿ : 26690068

ಮುದ್ರಣ : ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್, ಬೆಂಗಳೂರು.

# ಪ್ರಕಾಶಕರ ನುಡಿ

ಪರಮಪೂಜ್ಯ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಆದೇಶದಂತೆ ಅಖಿಲ ಭಾರತ ಮಾಧ್ವ ಮಹಾ ಮಂಡಲವು ವಿನೂತನ ಪ್ರಕಾಶನ ಯೋಜನೆ ಹಮ್ಮಿಕೊಂಡಿದೆ. ಶಾಸ್ತ್ರ ಹಾಗೂ ಇತಿಹಾಸ-ಪುರಾಣಗಳ ಹೆಚ್ಚಿನ ಪರಿಚಯವಿಲ್ಲದ ಓದುಗರಿಗೆ ವೇದಾಂತ ಇತಿಹಾಸ-ಪುರಾಣ-ಧರ್ಮಶಾಸ್ತ್ರ-ಜ್ಯೋತಿಷ ಇತ್ಯಾದಿ ವಿಷಯಗಳಲ್ಲಿನ ಸೂಕ್ಷ್ಮ ಪ್ರಮೇಯಗಳನ್ನು ಪರಿಚಯಿಸುವುದು ನಮ್ಮ ಮುಖ್ಯ ಗುರಿಯಾಗಿದೆ. ಪ್ರಸಕ್ತ ಎಲ್ಲರೂ ಬಯಸುವ ದೀರ್ಘಾಯುಷ್ಯದ ಗುಟ್ಟು ಎಂಬ ವಿಷಯದ ಬಗ್ಗೆ ವಿದ್ವಾಂಸರಾದ ಶ್ರೀ ರಾಮವಿಟ್ಠಲಾಚಾರ್ಯರು ರಚಿಸಿದ ಸಮೃದ್ಧವೂ ಉಪಯುಕ್ತವೂ ಆದ ಹೊತ್ತಿಗೆಯನ್ನು ಓದುಗರಿಗೆ ಉಪಾಯನವಾಗಿ ನೀಡುತ್ತಿದ್ದೇವೆ. ಶ್ರೀರಾಮವಿಟ್ಠಲಾಚಾರ್ಯರು ನಾಡಿನ ಖ್ಯಾತ ವಿದ್ವಾಂಸರು, ಪಾಠ-ಪ್ರವಚನಗಳಿಂದ ಪ್ರಸಿದ್ಧರು. ಅವರ ಲೇಖನಿ ಅತ್ಯಂತ ಮೊನಚು. ಆಳ ವಿಷಯಗಳ ಸರಳ ಪ್ರತಿಪಾದನೆಯಲ್ಲಿ ಅವರು ಎತ್ತಿದ ಕೈ. ಪುಟ್ಟ ಪುಟ್ಟ ವಾಕ್ಯಗಳಿಂದ ವಿಷಯಗಳನ್ನು ನೇರವಾಗಿ ಪ್ರತಿಪಾದಿಸುವ ಅವರ ಶೈಲಿ ಓದಿಸಿಕೊಂಡು ಹೋಗುವಂತಹದು. ಈಗ ನೀಡುತ್ತಿರುವ ಅವರ ಕೃತಿ ಅಪೂರ್ವ ವಿಷಯಗಳ ಸಂಕಲನವಾಗಿದೆ. ನಿಧಿಯಂತೆ ಉಪಾದೇಯ ವಾಗಿದೆ. ಮಹಾಭಾರತ-ಪುರಾಣ-ಧರ್ಮಶಾಸ್ತ್ರ ಗ್ರಂಥಗಳನ್ನು ಆಧರಿಸಿ ದೀರ್ಘಾಯುಷ್ಯದ ಉಪಾಯನಗಳ ನಿರೂಪಣೆಯ ಜೊತೆಗೆ ಆಯುಹ್ರ್ರಾಸದ ರೋಚಕ ನಿರೂಪಣೆ ಇಲ್ಲಿದೆ. ದೈನಂದಿನ ಪಠಿಸಬೇಕಾದ ಆಯುರ್ವೃದ್ಧಿಕಾರಕವೂ ಸಮೃದ್ಧಿದಾಯಕವೂ ಆದ ಮಂತ್ರಗಳ ಸಂಯೋಜನೆ ಇಲ್ಲಿದೆ. ಪುರೋಹಿತರಿಲ್ಲದ ಊರಿನಲ್ಲೂ ಮಾಡಬಹುದಾದ ಹೋಮವಿಧಿಗಳ ಅಗತ್ಯ ಸಂಗ್ರಹ ಇಲ್ಲಿದೆ. ನಿತ್ಯಪಠಿಸಬೇಕಾದ ವೇದಮಂತ್ರಗಳು - ಪುರಾಣ ಸ್ತೋತ್ರಗಳ ಜೊತೆಗೆ ಹರಿದಾಸರ ಪದಪದ್ಯ ಸುಳಾದಿಗಳನ್ನು ಪಾರಾಯಣ ಸೌಕರ್ಯಕ್ಕಾಗಿ ಇಲ್ಲಿ ನೀಡಲಾಗಿದೆ. ಅನೇಕ

ವೈಶಿಷ್ಟ್ಯಗಳನ್ನೊಳಗೊಂಡ ಈ ಕೃತಿಯನ್ನು ಸಿದ್ಧಪಡಿಸಿದ ವಿ॥ ರಾಮವಿಟ್ಠಲಾಚಾರ್ಯರ ಅವಿರತ ಶ್ರಮಕ್ಕೆ ನಾವು ಋಣಿಗಳು. ಈ ಯೋಜನೆಯನ್ನು ಸಿದ್ಧಪಡಿಸಿದ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರಿಗೆ ನಮ್ಮ ಶಿರಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇವೆ. ಈ ಸಂಪುಟದ ಅಕ್ಷರ ಜೋಡಣೆ ಕಾರ್ಯವನ್ನು ಶ್ರೀ ಪ್ರೇಮಕುಮಾರ್ ವಹಿಸಿಕೊಂಡು ಅಂದವಾಗಿ ಮಾಡಿಕೊಟ್ಟಿದ್ದಾರೆ. ಇವರಿಗೆ ನನ್ನ ಅಭಿನಂದನೆಗಳು. ಹಾಗೂ ಮುದ್ರಣವನ್ನು ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್ ಸಕಾಲಕ್ಕೆ ಮುದ್ರಣ ಮಾಡಿಕೊಟ್ಟಿದ್ದಾರೆ. ಇವರಿಗೆ ಅಭಿನಂದನೆಗಳು. ಈ ಸಂಪುಟದ ಪ್ರಕಟನೆಗೆ ಎಲ್ಲಾ ಹಂತದಲ್ಲಿ ಶ್ರಮವಹಿಸಿದ ಟ್ರಸ್ಟೀ ಕಾರ್ಯದರ್ಶಿಗಳಾದ ಶ್ರೀ ಹೆಚ್.ಎನ್.ನಾರಾಯಣರಾಯರಿಗೆ ಹಾಗೂ ಅ.ಭಾ.ಮಾ.ಮ.ಮಂಡಲದ ಕಾರ್ಯದರ್ಶಿಗಳಾದ ಶ್ರೀಯುತ ಕೃಷ್ಣಾಚಾರ್ಯ ಗೋಟೂರ ಇವರುಗಳಿಗೆ ನನ್ನ ಪ್ರೀತಿಯ ಅಭಿನಂದನೆಗಳು. ಜನತೆಯು ಈ ಕೃತಿಯನ್ನು ಆದರದಿಂದ ಬರಮಾಡಿಕೊಳ್ಳುವುದಾಗಿ ನಂಬುವೆ.

**ಕೆ.ವಿಷ್ಣುಮೂರ್ತಿ ಎರ್ಕಾಡಿತ್ತಾಯ**
ಅಧ್ಯಕ್ಷರು
ಅ.ಭಾ.ಮಾ.ಮ.ಮಂಡಲ ಪಬ್ಲಿಕೇಷನ್ ಟ್ರಸ್ಟ್
ಅಖಿಲ ಭಾರತ ಮಾಧ್ವ ಮಹಾ ಮಂಡಲ,
ಬೆಂಗಳೂರು

# ಲೇಖಕರ ಮಾತು

'ದೀರ್ಘಾಯುಷ್ಯ ರಹಸ್ಯ' ಈ ಗ್ರಂಥವನ್ನು ಬರೆಯಬೇಕೆಂಬುದು ನನ್ನ ಬಹುದಿನದ ಕನಸು; ಮಹಾಭಾರತದ ಅನುಶಾಸನ ಪರ್ವದ 161ನೇ ಅಧ್ಯಾಯವನ್ನು ಓದಿದಾಗಲಿಂದ. ಆಯುರ್ವೃದ್ಧಿಕಾರಕಗಳು ಯಾವುವು? ಆಯುಷ್ಯಹಾನಿಕಾರಕಗಳು ಯಾವುವು? ಎಂಬುದರ ವಿವರಣೆ ಅನುಶಾಸನಪರ್ವ ಹಾಗೂ ಬೇರೆ ಬೇರೆ ಪರ್ವಗಳಲ್ಲಿ ಬರುತ್ತದೆ. ಮನುಸ್ಮೃತಿಯಲ್ಲಿಯೂ ಇದರ ವಿವರಗಳು ಸಂಕ್ಷೇಪವಾಗಿ ಬರುತ್ತವೆ.

ಆಯುರ್ವೃದ್ಧಿಗಾಗಿ ಧನ್ವಂತರಿಹೋಮ ಆಯುಷ್ಯಹೋಮಗಳು ಧನ್ವಂತರಿಜಪ, ನಾಮತ್ರಯಮಂತ್ರಜಪ, ಮಾರ್ಕಂಡೇಯಹೋಮಗಳು ವಿಹಿತವಾಗಿವೆ. ಸಪ್ತಚಿರಂಜೀವಿಗಳ ಸ್ಮರಣೆ ಪೂಜೆಗಳು ಕರ್ತವ್ಯವಾಗಿವೆ. ಪ್ರತಿವಾರ್ಷಿಕ ಹುಟ್ಟಿದ ಹಬ್ಬಗಳನ್ನು ಆಚರಿಸಿಕೊಳ್ಳುವ ಕ್ರಮ, ಆಯುರ್ವರ್ಧಕ ಸ್ತೋತ್ರಗಳು, ಆಯುಷ್ಯಪ್ರಾರ್ಥನಾ ದೇವರನಾಮಗಳು ಇವೆಲ್ಲವನ್ನು ಒಂದೆಡೆ ಸಂಗ್ರಹಿಸಿಕೊಡಬೇಕೆನ್ನುವ ಅಪೇಕ್ಷೆ ಇತ್ತು. ಸಾಧ್ಯವಿದ್ದಷ್ಟು ಈ ಪುಸ್ತಕದಲ್ಲಿ ಅದೆಲ್ಲವನ್ನು ಸಂಕಲಿಸಿದೆ. ಅಖಿಲ ಭಾರತ ಮಾಧ್ವ ಮಹಾಮಂಡಳದ ಕಾರ್ಯದರ್ಶಿಗಳಾದ ಶ್ರೀ ಗೋಟೂರು ಕೃಷ್ಣಾಚಾರ್ಯರು ತುಂಬ ಅಭಿಮಾನದಿಂದ ಆತ್ಮೀಯತೆಯ ಒತ್ತಾಯ ಮಾಡಿ ನನ್ನ ಕನಸು ನನಸಾಗಲು ಪ್ರೇರಣೆಯಿತ್ತಿದ್ದಾರೆ. ಅವರಿಗೆ ನನ್ನ ಗೌರವದ ಪ್ರೀತಿಯ ಅಭಿನಂದನೆಗಳು.

ಇದರಲ್ಲಿ ಆಯುಷ್ಯವೃದ್ಧಿಗೆ ಸಂಬಂಧಪಡುವಂತೆ ಬೇರೆ ಸಂಚಿಕೆಗಳಲ್ಲಿ ಪ್ರಕಾಶನಗೊಂಡ ಹಲವು ವಿದ್ವಾಂಸರ ಲೇಖನಗಳನ್ನು ಹಾಗು

ವಿದ್ವಾಂಸರಿಂದ ಅನೇಕ ಮಾಹಿತಿಗಳನ್ನು ಪಡೆದುಕೊಂಡಿದ್ದೇನೆ. ಪಲಿಮಾರುಮಠದ 'ಯೋಗದೀಪಿಕಾ' ಗುರುಕುಲದ ಸ್ಮರಣ ಸಂಚಿಕೆ 'ಧನ್ವಂತರಿ'ಯಲ್ಲಿ ಪ್ರಕಟಕೊಂಡ ಪೂಜ್ಯ ವಿದ್ವಾಂಸರಾದ ಶ್ರೀ ಬನ್ನಂಜೆ ಗೋವಿಂದಾಚಾರ್ಯರು, ಶ್ರೀರಾಮಾನಾಥಾಚಾರ್ಯರು, ಶ್ರೀ ಸಗ್ರಿ ರಾಘವೇಂದ್ರಾಚಾರ್ಯರ ಲೇಖನಗಳನ್ನು ಇಡಿಯಾಗಿ ಇಲ್ಲಿ ಸೇರಿಸಿದ್ದೇನೆ. ಈ ಎಲ್ಲ ಹಿರಿಯ ವಿದ್ವಾಂಸರಿಗೆ ತುಂಬು ಭಕ್ತಿಯ ಕೃತಜ್ಞತಾಪೂರ್ವಕ ವಂದನೆಗಳು. ಹಾಗೆಯೇ 'ಮುಖ್ಯಪ್ರಾಣ' ಮಾಸಿಕ ಪತ್ರಿಕೆಯಲ್ಲಿ ಪ್ರಕಟಗೊಂಡ ಶ್ರೀ ವಿದ್ವಾನ್ ಹೆಚ್.ಸತ್ಯನಾರಾಯಣಾಚಾರ್ಯರ 'ಧನ್ವಂತರಿ ಹೋಮ' ಲೇಖನವನ್ನು ಸೇರಿಸಿಕೊಂಡಿದ್ದೇನೆ. ಪ್ರೀತಿಯ ವಿದ್ವನ್ಮಿತ್ರರಾದ ಶ್ರೀ ಸತ್ಯನಾರಾಯಣಾಚಾರ್ಯರು 'ಆಯುಷ್ಕರ್ಮ'ದ ಬಗ್ಗೆ ಪ್ರಮಾಣಗಳ ಮಾಹಿತಿಯನ್ನು ಒದಗಿಸಿಕೊಟ್ಟಿರುವರು. ಅಲ್ಲದೆ ಈ ಪುಸ್ತಕವನ್ನು ಸಮಗ್ರವಾಗಿ ವಿಶೇಷತಃ ಹೋಮಪ್ರಯೋಗಗಳನ್ನು ಪರಿಶೀಲನೆ ಮಾಡಿ ಮಾರ್ಗದರ್ಶನ ಮಾಡಿರುತ್ತಾರೆ. ಅವರಿಗೆ ಹರಿವಾಯುಗಳು ಅನುಗ್ರಹಿಸಿ ಉತ್ತರೋತ್ತರ ಶ್ರೇಯಸ್ಸನ್ನು ಉಂಟು ಮಾಡಲೆಂಬ ಪ್ರೀತಿಯ ಶುಭಕಾಮನೆಗಳೊಂದಿಗೆ ಗೌರವದ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ಪ್ರೀತಿಯ ಪಂಡಿತಮಿತ್ರ ಶ್ರೀ ತಿರುಮಲ ಕುಲಕರ್ಣಿಯವರು ಪೂರ್ಣಪ್ರಜ್ಞ ವಿದ್ಯಾಪೀಠದ ಸುಧಾ ವಿದ್ಯಾರ್ಥಿ ರಮೇಶನ ಮೂಲಕ ಭಾಗವತದಲ್ಲಿ ಆಯುಷ್ಯದ ಬಗ್ಗೆ ಬರುವ ಮಾಹಿತಿಗಳನ್ನು ಒದಗಿಸಿದ್ದಾರೆ. ಅವರಿಗೆ ಪ್ರೀತಿಯ ಕೃತಜ್ಞತೆಗಳು.

ಕುಂಭಾಸಿಯ ವಿದ್ವಾನ್ ಕೆ.ಶ್ರೀಪತಿ ಉಪಾಧ್ಯಾಯರು ಬರೆದ 'ರಥಕಲ್ಪ' ಗ್ರಂಥದಿಂದ ಶಾಂತಿಗಳ ಅನ್ವಾಧಾನ ಆಯುಷ್ಯಪ್ರಾರ್ಥನಾ ಮಂತ್ರಗಳು ಶಾಂತಿಗಳ ಕಾರಿಕೆ ವಿಧಾನಗಳನ್ನು ಇಲ್ಲಿ ಸೇರಿಸಿಕೊಂಡಿದ್ದೇನೆ. ಅವರಿಗೆ ಪ್ರೀತಿಯ ಗೌರವದ ಕೃತಜ್ಞತೆಗಳು.

ಜನರು ರೋಗಾದಿ ಉಪದ್ರವಗಳು, ಸಾಲಬಾಧೆ, ಹೃದಯ ರೋಗಗಳಿಂದ ಮರಣಹೊಂದುವುದನ್ನು ಸಮಾಜದಲ್ಲಿ ಕಾಣುತ್ತಿದ್ದೇವೆ. ಹಾಗಾಗಿ ದುರಿತಾಪಹಾರಿ ನರಸಿಂಹ, ದುರ್ಗಾಸ್ತೋತ್ರಗಳು, ಋಣ ಮೋಚನ ಸ್ತೋತ್ರಗಳು, ಸಂಪತ್ಪ್ರದ ಲಕ್ಷ್ಮೀಸ್ತೋತ್ರಗಳು, ಗ್ರಹಸ್ತೋತ್ರ ಗಳು, ಹೃದ್ರೋಗ ಪರಿಹಾರಕ ಕಪಿಲಸುಳಾದಿ ಅಪಮೃತ್ಯು ಪರಿಹಾರಕ ದೇವರನಾಮಗಳು ಆಯುಷ್ಯ ಪ್ರಾರ್ಥನಾ ದೇವರನಾಮಗಳನ್ನು ಇಲ್ಲಿ ಕೊಡಲಾಗಿದೆ. ಶ್ರೀ ಎಸ್. ಜಿ. ರಾಮಚಂದ್ರದಾಸರು ಕಪಿಲಸುಳಾದಿಗಳನ್ನು ಒದಗಿಸಿ ಉಪಕಾರ ಮಾಡಿದ್ದಾರೆ. ಅವರಿಗೆ ಅಭಿವಂದನೆಗಳು. ಅನೇಕ ಹೃದ್ರೋಗಿಗಳಿಗೆ ಈ ಕಪಿಲಸುಳಾದಿಯನ್ನು ಪಾರಾಯಣ ಮಾಡುವಂತೆ ಹೇಳಿ ಅದರ ಫಲಿತಾಂಶವನ್ನು ಅವರು ಅನುಭವಿಸುವಂತೆ ಪ್ರೇರಣೆಯಿತ್ತಿದ್ದಾರೆ ಶ್ರೀರಾಮಚಂದ್ರದಾಸರು.

ಅಪಮೃತ್ಯು ಪರಿಹಾರಕ ದೇವರನಾಮಗಳನ್ನು ಶ್ರೀವಿಜಯದಾಸರ ವಿಶೇಷಾನುಗ್ರಹ ಪಾತ್ರರಾಗಿದ್ದ ವೈಷ್ಣವದೀಕ್ಷಾಸಂಪನ್ನ ಶ್ರೀ ಹರಿದಾಸರತ್ನಂ ಗೋಪಾಲದಾಸರ ಪುಸ್ತಕದಿಂದ ಸ್ವೀಕರಿಸಿದ್ದೇನೆ. ಹರಿಪದವನ್ನು ಸೇರಿರುವ ಶ್ರೀಗೋಪಾಲದಾಸರಿಗೆ ಭಕ್ತಿಯ ಅಭಿವಂದನೆಗಳು.

ಪ್ರತಿವರ್ಷ ಹುಟ್ಟಿದ ಹಬ್ಬವನ್ನು ಮಾಡಿಕೊಳ್ಳುವ ಸರಳ ವಿಧಾನವನ್ನು ಇಲ್ಲಿ ಕೊಡಲಾಗಿದೆ. ಪುರೋಹಿತರ ಮೂಲಕ ಆಯುಷ್ಯಹೋಮಾದಿ ಗಳನ್ನು ಮಾಡಿಕೊಳ್ಳುವ ಸೌಲಭ್ಯವಿರದಿದ್ದರೂ ತಾವೇ ಈ ಪುಸ್ತಕ ನೋಡಿಕೊಂಡು ತಮ್ಮ ಅಥವಾ ಮಕ್ಕಳ ವರ್ಧಂತಿಯನ್ನು ಆಚರಿಸಿ ಕೊಂಡು ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು. ಹುಟ್ಟಿದ ಹಬ್ಬದಂದು ಪಾರಾಯಣ ಮಾಡಬೇಕಾದ ಆಯುಷ್ಯ ಪ್ರಾರ್ಥನಾಮಂತ್ರಗಳನ್ನು ಕೊಟ್ಟಿದೆ. ಅವುಗಳನ್ನು ಪಠಿಸಬೇಕು.

ಈ ಜ್ಞಾನಕಾರ್ಯದ ಹಿಂದೆ ಈ ಸಾಧನಶರೀರವನ್ನು ಹರಿಪ್ರೇರಣೆಯಿಂದ ಕೊಟ್ಟು ಉಪಕರಿಸಿರುವ ಪೂಜ್ಯ ತಂದೆಯವರಾದ

ಇದೇ ಸರ್ವಧಾರಿ ಪುಷ್ಯ ಶುದ್ಧ ಪಂಚಮಿಯಂದು ನಮ್ಮನ್ನಗಲಿ ದೈವಾಧೀನರಾದ ಶ್ರೀ ಎಂ.ಆರ್.ಗೋಪಾಲಕೃಷ್ಣರಾವ್ ಅವರಿಗೆ ಭಕ್ತಿಯ ಪ್ರಣಾಮಗಳೊಂದಿಗೆ ಕೃತಜ್ಞನಾಗಿದ್ದೇನೆ. ಹಾಗೆ ಹೊತ್ತು ಹೆತ್ತು ಸಲಹಿದ ಮಾ॥ಶ್ರೀ॥ ರಾಧಮ್ಮ ಹಾಗೂ ಮಾ॥ಶ್ರೀ॥ ಶಾರದಮ್ಮನವರಿಗೆ ಕೃತಜ್ಞತಾಪೂರ್ವಕ ವಂದನೆಗಳನ್ನು ಅರ್ಪಿಸುತ್ತೇನೆ.

ನನ್ನನ್ನು ಪೂರ್ಣಪ್ರಜ್ಞ ವಿದ್ಯಾಪೀಠಕ್ಕೆ ಸೇರಿಸಿ ಜನ್ಮಸಾರ್ಥಕ್ಯವನ್ನು ಕರುಣಿಸಿದ ಪೂಜ್ಯ ದೊಡ್ಡಪ್ಪಂದಿರಾದ ಶ್ರೀ ದಿ॥ ಎಂ.ಆರ್.ಬಿ.ವಿಶ್ವಾಮಿತ್ರಾ ಚಾರ್ಯ (ಹರಯೇ ನಮಃ) ಅವರಿಗೆ ಹಾಗೂ ಮಮತೆಯಿಂದ ಪೋಷಿಸಿದ ಮಾ॥ಶ್ರೀ ದೊಡ್ಡಮ್ಮನವರಿಗೂ ಭಕ್ತಿಯ ಸಾಷ್ಟಾಂಗ ಪ್ರಣಾಮಗಳು.

ನನ್ನ ಬರವಣಿಗೆಗೆ ಸಹಕಾರವಿತ್ತ ಶ್ರೀಮತಿ ಸೌ॥ ಸುಧಾ, ಚಿ॥ವಾಸುದೇವವಿಟ್ಠಲನಿಗೆ ಆಶೀರ್ವಾದಗಳು.

ಕೊನೆಯಲ್ಲಿ, ಮುಖ್ಯವಾಗಿ ಏನೂ ಅರಿಯದ ನನ್ನನ್ನು ಅಂತಃಕರಣ ಪೂರ್ವಕವಾಗಿ ಪ್ರೀತಿಯಿಂದ ಅನ್ನ ವಿದ್ಯೆ ಉದ್ಯೋಗಗಳನ್ನು ಕೊಟ್ಟು ದೈಹಿಕವಾಗಿ ಬೌದ್ಧಿಕವಾಗಿ ಬೆಳೆಸಿ ಒಂದು ಮೂರ್ತಿಯಾಗಿ ಮಾಡಿರುವ ಮಹಾಶಿಲ್ಪಿ ಪರಮಪೂಜ್ಯ ಶ್ರೀಶ್ರೀ 108 ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಾಷ್ಟಾಂಗ ಪ್ರಣಾಮಗಳೊಂದಿಗೆ ಕೃತಜ್ಞತಾಪೂರ್ವಕ ಈ ಕೃತಿಯನ್ನು ಸಮರ್ಪಿಸುತ್ತಿದ್ದೇನೆ. ಆಶೀರ್ವಚನದ ಆಭರಣ ತೊಡಿಸಿ ಈ ಪುಸ್ತಕದ ಅಂದ ಹೆಚ್ಚಿಸಿದ ಶ್ರೀಗಳವರಿಗೆ **ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ.**

ಸಜ್ಜನ ವಿಧೇಯ
**ಶ್ರೀರಾಮವಿಟ್ಠಲಾಚಾರ್ಯ**

# ಅನುಗ್ರಹ ಸಂದೇಶ

ನಮ್ಮ ಎಲ್ಲಾ ಆಧ್ಯಾತ್ಮಿಕ ಮತ್ತು ಲೌಕಿಕ ಸಾಧನೆಗಳಿಗೆ ಆರೋಗ್ಯವೇ ಬುನಾದಿ. ಆರೋಗ್ಯವಂತನಾಗಿ ಬಹುಕಾಲ ಬದುಕಲು ಹವಣಿಸದ ವ್ಯಕ್ತಿಯಿಲ್ಲ. ಸುದೃಢ ರೋಗಮುಕ್ತ ಸಮಾಜದ ನಿರ್ಮಾಣಕ್ಕಾಗಿ ಮುಖ್ಯವಾಗಿ ಎರಡು ಮಾರ್ಗಗಳನ್ನು ನಾವು ಅನುಸರಿಸಬೇಕಾಗಿದೆ. ಒಂದು ರೋಗವನ್ನು ತಡೆಯಲು ಮತ್ತು ಅಂಟಿಕೊಂಡ ರೋಗಗಳನ್ನು ನಿವಾರಿಸಲು ವೈದ್ಯಕೀಯ ಚಿಕಿತ್ಸೆಯಾದರೆ ಇದರ ಜೊತೆಗೆ ವಿವಿಧ ವಿಧಾನಗಳಿಂದ ಭಗವಂತನ ಹಾಗೂ ದೇವತೆಗಳ ಪ್ರಾರ್ಥನೆಯನ್ನೂ ನಾವು ಮಾಡಬೇಕು. ನಮ್ಮ ಪ್ರತಿಯೊಂದು ಕಾರ್ಯದ ಯಶಸ್ಸಿಗೂ ನಮ್ಮ ಸಾಧನೆ ಸಾಹಸಗಳ ಜೊತೆಗೆ ದೇವರ ಅನುಗ್ರಹವೂ ಅವಶ್ಯವೆಂದು ಶ್ರೀಮದಾನಂದತೀರ್ಥ ಭಗವತ್ಪಾದರು ಒತ್ತಿ ಹೇಳಿದ್ದಾರೆ. ಪ್ರಾರ್ಥನೆ, ನಾಮಸ್ಮರಣೆ, ಪಾರಾಯಣ, ವಿಶೇಷ ಜಪ, ವಿಶೇಷ ಪೂಜೆ, ಹೋಮಗಳು ಮುಂತಾದ ಅನೇಕ ರೀತಿಯ ಭಗವದಾರಾಧನೆಗಳಿಂದ ದೇವರ ಅನುಗ್ರಹವನ್ನು ನಾವು ಪಡೆಯಬಹುದು. ಇದು ನಮ್ಮ ಜೀವನಕ್ಕೆ ಧ್ಯೇಯ ಆತ್ಮವಿಶ್ವಾಸಗಳನ್ನು ತುಂಬುವುದರ ಜೊತೆಗೆ ಪುಣ್ಯ ಅಥವಾ ಪ್ರಸಾದದ ಮುಖಾಂತರವಾಗಿ ದೇಹದ ಮೇಲೆ ಅದೃಶ್ಯ ರೀತಿಯ ಅದ್ಭುತ-ಪರಿಣಾಮವನ್ನು ಮಾಡಬಲ್ಲದು. ನಮ್ಮ ವಿದ್ಯಾಪೀಠದ ಅಧ್ಯಾಪಕರೂ, ಪ್ರಿಯಶಿಷ್ಯರೂ ಆದ ಶ್ರೀ ರಾಮವಿಟ್ಠಲಾಚಾರ್ಯರು ಎಲ್ಲ ಪುರಾಣ ಗ್ರಂಥಗಳನ್ನು ಪ್ರಾಚೀನ ಕೃತಿಗಳನ್ನು ಪರಿಶೀಲಿಸಿ ಆರೋಗ್ಯ ಮತ್ತು ಆಯುಸ್ಸಿನ ಬಗ್ಗೆ ನಾವು ಮಾಡಬೇಕಾದ ಸಾಧನೆಗಳನ್ನು ಕ್ರೋಢೀಕರಿಸಿ ಈ ಕೃತಿಯಲ್ಲಿ ವಿವರಿಸಿ ಧಾರ್ಮಿಕ ಜನತೆಗೆ ಮಹೋಪಕಾರವನ್ನು ಮಾಡಿದ್ದಾರೆ.

ಇದು ದೀರ್ಘನೀರೋಗ ಜೀವನದ ಧಾರ್ಮಿಕ ಸಾಧನೆಗಳ ಕೈಪಿಡಿಯಾಗಿದೆ. ಇದಕ್ಕಾಗಿ ರಾಮವಿಟ್ಠಲಾಚಾರ್ಯರನ್ನು ನಾವು ಅಭಿನಂದಿಸುವುದರ ಜೊತೆಗೆ ಅವರಿಂದ ವಿವಿಧ ವಿಷಯಗಳಲ್ಲಿ ಇಂತಹ ಧಾರ್ಮಿಕ, ಆಧ್ಯಾತ್ಮಿಕ ಕೃತಿಗಳು ಹೊರ ಹೊಮ್ಮಲೆಂದು ಆಶಿಸುತ್ತೇವೆ. ಅಖಿಲ ಭಾರತ ಮಾಧ್ವ ಮಹಾ ಮಂಡಲದಿಂದ ವಿವಿಧ ವಿಷಯಗಳಲ್ಲಿ ಧಾರ್ಮಿಕ ಜನತೆಗೆ ಉಪಯುಕ್ತವಾಗುವ ಇಂತಹ ಕೃತಿಗಳು ಪ್ರಕಟವಾಗಲೆಂದು ಆಶಿಸುತ್ತೇವೆ.

**ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು**
ಶ್ರೀ ಪೇಜಾವರ ಮಠ, ಉಡುಪಿ

## ವಿಷಯಾನುಕ್ರಮಣಿಕೆ

॥ ಶ್ರೀ ವೇದವ್ಯಾಸಾಯ ನಮಃ ॥

॥ ಶ್ರೀ ಮುಖ್ಯಪ್ರಾಣಾಯ ನಮಃ ॥

॥ ಶ್ರೀ ಅಗಸ್ತ್ಯೇಶ್ವರಾಯ ನಮಃ ॥

॥ ಶ್ರೀ ವಿಶ್ವಂಭರಾಯ ನಮಃ ॥

॥ ಶ್ರೀಶ್ರೀಪಾದರಾಜಗುರವೇಽಸ್ತು ನಮಶ್ಶುಭಾಯ ॥

# ದೀರ್ಘಾಯುಷ್ಯ ರಹಸ್ಯ

'ವೇದದಲ್ಲಿ ಶತಾಯುಃ ಪುರುಷಃ ಎನ್ನಲಾಗಿದೆ. ಆದರೆ ಸಣ್ಣ ವಯಸ್ಸಿನ ಮಕ್ಕಳೂ ಸಾಯುವರಲ್ಲವೇ? ಕಾರಣವೇನು? ಯಾವ ಕರ್ಮಾಚರಣೆ ಯಿಂದ ಮನುಷ್ಯ ದೀರ್ಘಾಯುಷ್ಯವನ್ನು ಪಡೆಯುತ್ತಾನೆ? ಮತ್ತಾವ ಕರ್ಮದಿಂದ ಅಲ್ಪಾಯುವಾಗುತ್ತಾನೆ? ಕೀರ್ತಿ ಹಾಗೂ ಸಂಪತ್ತನ್ನು ಯಾವುದರಿಂದ ಪಡೆಯುತ್ತಾನೆ? ತಪಸ್ಸಿನಿಂದಲೋ? ಬ್ರಹ್ಮಚರ್ಯ ದಿಂದಲೋ? ಜಪಹೋಮಗಳಿಂದಲೋ? ಅಥವಾ ಹುಟ್ಟಿನಿಂದಲೋ? ಆಚಾರದಿಂದಲೋ? ತಿಳಿ ಹೇಳಿ ತಿಳಿದ ಪಿತಾಮಹರೆ ?'

ಮಹಾಭಾರತದ ಅನುಶಾಸನಪರ್ವದ 161ನೆಯ ಅಧ್ಯಾಯದಲ್ಲಿ ಧರ್ಮರಾಜನು ಭೀಷ್ಮರಲ್ಲಿ ಕೇಳಿದ ಪ್ರಶ್ನೆಯಿದು. ನಮಗೆಲ್ಲ ಬರುವ ಪ್ರಶ್ನೆಯಿದು. ದೀರ್ಘಜೀವನ ಬಯಸುವವರೆಲ್ಲ ಉತ್ತರ ತಿಳಿಯಬೇಕಾದ ಪ್ರಶ್ನೆಯಿದು. ಸುಮಾರು 170 ಶ್ಲೋಕಗಳ ಹರವಿನಲ್ಲಿ ಹರಡಿಕೊಂಡ ಭೀಷ್ಮರ ಉತ್ತರದ ಸಂಗ್ರಹವನ್ನು ತಿಳಿಯೋಣ. ತಿಳಿದು ಬಾಳೋಣ.

## ಆಚಾರದಿಂದ ಆಯುಷ್ಯ

**ಆಚಾರಾಲ್ಲಭತೇ ಹ್ಯಾಯುರಾಚಾರಾಲ್ಲಭತೇ ಶ್ರಿಯಮ್ ।**
**ಆಚಾರಾತ್ಕೀರ್ತಿಮಾಪ್ನೋತಿ ಪುರುಷಃ ಪ್ರೇತ್ಯ ಚೇಹ ಚ ॥**

ಆಚಾರದಿಂದಲೇ ಆಯುಸ್ಸು, ಆಚಾರದಿಂದಲೇ ಸಂಪತ್ತು, ಆಚಾರದಿಂದಲೇ ಪುರುಷನು ಬದುಕಿನಲ್ಲಿ ಮತ್ತು ಮರಣೋತ್ತರದಲ್ಲಿಯೂ ಕೀರ್ತಿಯನ್ನು ಪಡೆಯುವನು.

## ದುರಾಚಾರದಿಂದ ಆಯುಷ್ಯಹಾನಿ

**ದುರಾಚಾರೋ ಹಿ ಪುರುಷಃ ನೇಹಾಯುರ್ವಿಂದತೇ ಮಹತ್ ।**

ದುರಾಚಾರಿಯಾದ ಪುರುಷ ಹೆಚ್ಚಿನ ಆಯುಷ್ಯವನ್ನು ಪಡೆಯುವುದಿಲ್ಲ.

ಆಚಾರಶೀಲನಾದ ಧಾರ್ಮಿಕ ವ್ಯಕ್ತಿ ಕಾಣದಿದ್ದರೂ ಅವನ ಬಗ್ಗೆ ಕೇಳಿಯೇ ಸಜ್ಜನರು ಅವನನ್ನು ತಮ್ಮ ಮಾದರಿಯಾಗಿಸಿಕೊಳ್ಳುವರು.

ನಾಸ್ತಿಕರು, ಸತ್ಕರ್ಮಾಚರಣೆಯಿಲ್ಲದವರು, ಗುರುಗಳನ್ನು ಶಾಸ್ತ್ರಗಳನ್ನು ಮೀರಿ ನಡೆದ ಅಧಾರ್ಮಿಕರಾದ ದುರಾಚಾರಿಗಳು ಅಲ್ಪಾಯುಗಳಾಗುವರು.

## ಇಂತಹವನು ಶತಾಯು

**ಅಕ್ರೋಧನಃ ಸತ್ಯವಾದೀ ಭೂತಾನಾಮವಿಹಿಂಸಕಃ ।**
**ಅನಸೂಯುರಜಿಹ್ಮಶ್ಚ ಶತಂ ವರ್ಷಾಣಿ ಜೀವತಿ ॥**

ಕೋಪಗೊಳ್ಳದವನು, ಸಜ್ಜನರಿಗೆ ಹಿತವಾಗುವಂತೆ ಮಾತನಾಡುವವನು, ಯಾರಿಗೂ ಹಿಂಸೆ ಮಾಡದವನು, ಯಾರಲ್ಲಿಯೂ ಅಸೂಯೆ ಪಡದವನು, ಕಪಟವಿಲ್ಲದವನು ನೂರು ವರ್ಷ ಬದುಕುತ್ತಾನೆ.

## ನಮ್ಮ ನಡವಳಿಕೆ ಹೀಗಿರಬೇಕು

ದಾರಿಯಲ್ಲಿ ಎದುರಿಗೆ ಬರುವ ಬ್ರಾಹ್ಮಣರಿಗೆ ಗೋವುಗಳಿಗೆ ರಾಜರಿಗೆ ಮುದುಕರಿಗೆ ಭಾರಹೊತ್ತವರಿಗೆ ಗರ್ಭಿಣಿಗೆ ದುರ್ಬಲರಿಗೆ ಮೊದಲು ದಾರಿ ಬಿಡಬೇಕು. ಅಶ್ವತ್ಥ ಬಿಲ್ವ ಶಮಿ ಮುಂತಾದ ದೇವತಾವೃಕ್ಷಗಳು ಎದುರಾದರೆ ಪ್ರದಕ್ಷಿಣೆ ಹಾಕಿ ಮುಂದೆ ನಡೆಯಬೇಕು. ಹಸು ಮುಂತಾದ ಪವಿತ್ರವಾದ ನಾಕು ಕಾಲಿನ ಪ್ರಾಣಿಗಳಿಗೆ ಗೌರವ ಕೊಡಬೇಕು. ಮಾನ್ಯರು ಹಿರಿಯರು ಆದ ದ್ವಿಜರನ್ನು ನಮಿಸಿ ಸಂಚಾರ ಮುಂದುವರಿಸಬೇಕು.

## ಮಾತಿನಿಂದ ಮನ ನೋಯಿಸಬಾರದು

**ಸಂರೋಹತ್ಯಗ್ನಿನಾ ದಗ್ಧಂ ವನಂ ಪರಶುನಾ ಹತಮ್ ।**
**ವಾಚಾ ದುರುಕ್ತಂ ಬೀಭತ್ಸಂ ನ ಸಂರೋಹತಿ ವಾಕ್‌ಕ್ಷತಮ್ ॥**

ಮತ್ತೊಬ್ಬರ ಮನಸ್ಸು ನೋಯುವಂತೆ ನಿಷ್ಠುರವಾಗಿ ಎಂದಿಗೂ ಮಾತನಾಡಬಾರದು. ಬೆಂಕಿಯಿಂದ ಸುಟ್ಟ ಕಾಡು, ಕೊಡಲಿಯಿಂದ ಕಡಿದ ಕಾಡು ಮತ್ತೆ ಚಿಗುರುವುದು. ಕೆಟ್ಟ ಮಾತಿನಿಂದ ನೊಂದ ಮನ ಮತ್ತೆ ಉಲ್ಲಸಿತವಾಗದು.

## ಅವಮಾನ ಮಾಡಬಾರದು

ಅಂಗವಿಕಲರನ್ನು ಅಧಿಕಾಂಗರನ್ನು ವಿದ್ಯೆಯಿಲ್ಲದವರನ್ನು ವಯಸ್ಸಾದವರನ್ನು ರೂಪವಿಲ್ಲದವರನ್ನು ಹಣವಿಲ್ಲದವರನ್ನು ಎಂದೂ ಅವಮಾನ ಮಾಡಬಾರದು.

ದೇವರಲ್ಲಿ ಧರ್ಮದಲ್ಲಿ ನಂಬಿಕೆಯಿಲ್ಲದ ನಾಸ್ತಿಕನಾಗಬಾರದು. ವೇದಶಾಸ್ತ್ರನಿಂದೆಯನ್ನು ಪರನಿಂದೆಯನ್ನು ಮತ್ತೊಬ್ಬರ ಮೇಲೆ ಸಿಡುಕುವುದನ್ನು, ದ್ವೇಷ, ಅಹಂಕಾರ, ಅಭಿಮಾನಗಳನ್ನು, ತೀಕ್ಷ್ಣ ಸ್ವಭಾವವನ್ನು ಬಿಡಬೇಕು.

## ಯಾರಿಗೂ ಹೊಡೆಯಬಾರದು

**ಪರಸ್ಯ ದಂಡಂ ನೋದ್ಯಚ್ಛೇತ್ ಕ್ರುದ್ಧೋ ನೈನಂ ನಿಪಾತಯೇತ್ ।**
**ಅನ್ಯತ್ರ ಪುತ್ರಾತ್ ಶಿಷ್ಯಾಚ್ಚ ಶಿಕ್ಷಾರ್ಥಂ ತಾಡನಂ ಸ್ಮೃತಮ್ ॥**

ಯಾವ ಸಂದರ್ಭದಲ್ಲಿಯೂ ತನ್ನ ಮಕ್ಕಳು ಹಾಗೂ ಶಿಷ್ಯರ ಹೊರತಾಗಿ ಮತ್ತೊಬ್ಬರನ್ನು ಬಡಿಯಲು ಕೋಲು ಎತ್ತಬಾರದು. ಹೊಡೆಯಬಾರದು. ಮಕ್ಕಳು ಹಾಗು ಶಿಷ್ಯರ ಮೇಲೆಯೂ ತಿದ್ದುವ ಸಲುವಾಗಿ ಮಾತ್ರ ಹಿಂಸೆಯಾಗದಂತೆ ಹೊಡೆಯಬಹುದು. ಶಿಕ್ಷಣ ಮುಖ್ಯವೇ ಹೊರತು ಶಿಕ್ಷೆ ಮುಖ್ಯವಲ್ಲ.

## ಬೇಗ ಏಳಬೇಕು; ಎದ್ದು ನಮಿಸಬೇಕು

**ನ ಚಾಭ್ಯುದಿತಶಾಯೀ ಸ್ಯಾತ್ ಪ್ರಾಯಶ್ಚಿತ್ತೀ ತಥಾ ಭವೇತ್ ।**

ಸೂರ್ಯೋದಯಕಾಲಕ್ಕೆ ಮಲಗಿರಬಾರದು. ಹಾಗೆ ಮಲಗಿದರೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗುವುದು. ಸೂರ್ಯೋದಯಕ್ಕೆ ಮುಂಚೆಯೇ ಎಚ್ಚೆತ್ತು ತಂದೆತಾಯಿಗಳನ್ನು ನಮಿಸಬೇಕು. ಎದ್ದು ಗುರು ಹಿರಿಯರಿಗೆ ನಮಸ್ಕರಿಸಿದರೆ ಅತಿಶಯವಾದ ಆಯುಷ್ಯ ವೃದ್ಧಿಯಾಗುವುದು.

## ಹಿರಿಯರನ್ನು ಗೌರವಿಸಬೇಕು

ಹಿರಿಯರು ಬಂದಾಗ ಎದ್ದು ಕಾಲು ಮುಟ್ಟಿ ನಮಸ್ಕಾರ ಮಾಡಬೇಕು. ಅವರಿಗೆ ಆಸನ ಕೊಡಬೇಕು. ಕೈ ಮುಗಿದು ನಿಲ್ಲಬೇಕು. ಅವರು ಹೊರಟಾಗ ಅವರ ಹಿಂದೆ ಹಿಂಬಾಲಿಸಬೇಕು. ಅದರಿಂದ ಆಯುಷ್ಯ ವೃದ್ಧಿಯಾಗುತ್ತದೆ.

ಮತ್ತೊಬ್ಬರ ಮೇಲೆ ಅಪವಾದ ಹೊರಿಸಬಾರದು. ಅಪ್ರಿಯವಾಗಿ ಮಾತನಾಡಬಾರದು. ಯಾವಾಗಲೂ ಸಿಡುಕುತ್ತಿರಬಾರದು. ಪತಿತ

ರೊಂದಿಗೆ ಹರಟೆ, ಅವರ ಸಹವಾಸಗಳನ್ನು ಮಾಡಬಾರದು. ಇವುಗಳಿಂದ ಬಹಳ ಆಯುಷ್ಯವನ್ನು ಪಡೆಯುತ್ತೇವೆ.

## ಅನುಷ್ಠಾನ

ಮುಂಜಾನೆ ಬ್ರಾಹ್ಮ ಮುಹೂರ್ತದ ನಸುಕಿನಲ್ಲಿ ಎದ್ದು ಸ್ನಾನ ಪೂರೈಸಿ ಸಂಧ್ಯಾವಂದನೆ ಮಾಡಬೇಕು. ಸಂಜೆಯ ಸಂಧ್ಯಾಕಾಲಕ್ಕೆ ಸರಿಯಾಗಿ ಮತ್ತೆ ತಪ್ಪದೆ ಸಂಧ್ಯಾವಂದನೆಯನ್ನು ಶ್ರದ್ಧಾ-ಭಕ್ತಿಯಿಂದ ಪೂರೈಸಬೇಕು. ಹೀಗೆ ನಿತ್ಯದಲ್ಲಿಯೂ ಸಂಧ್ಯಾಕಾಲಗಳಲ್ಲಿ ಸಂಧ್ಯಾವಂದನೆ ಮಾಡುವವನು ನೀರೋಗಿಯಾಗಿ ದೀರ್ಘಾಯುಷ್ಯವನ್ನು ಪಡೆಯುತ್ತಾನೆ.

**ಋಷಯೋ ನಿತ್ಯಸಂಧ್ಯತ್ವಾತ್ ದೀರ್ಘಮಾಯುರವಾಪ್ನುವನ್**

ಋಷಿಗಳು ನಿತ್ಯಸಂಧ್ಯಾನುಷ್ಠಾನದ ನಿಷ್ಠೆಯಿಂದಲೇ ದೀರ್ಘಾಯುಷಿಗಳಾಗಿದ್ದರು.

ದಂತಧಾವನ, ಸ್ನಾನ, ಅಭ್ಯಂಜನ ಸಂಧ್ಯಾವಂದನೆ ದೇವರ ಪೂಜೆ ಇವುಗಳನ್ನು ಪೂರ್ವಾಹ್ಣದಲ್ಲಿಯೇ ಪೂರೈಸಬೇಕು.

ವೇದ ಇತಿಹಾಸ ಪುರಾಣಗಳ ಅಧ್ಯಯನ ಹಾಗೂ ದಾನ, ಗಾಯತ್ರೀ ಮಂತ್ರಾರ್ಥ ಚಿಂತನೆ ಇವುಗಳನ್ನು ಏಕಾಗ್ರಚಿತ್ತದಿಂದ ನಿತ್ಯ ಮಾಡುತ್ತಿರಬೇಕು.

## ಬ್ರಹ್ಮಚರ್ಯ

ಯಾವ ಪುರುಷನೂ ಪರಸ್ತ್ರೀಸಂಗ ಮಾಡಬಾರದು. ಪರಸ್ತ್ರೀಸಂಗದಂತಹ ಆಯುಷ್ಯಹಾನಿಕಾರಕವಾದುದು ಬೇರೊಂದಿಲ್ಲ. ಪರಸಂಗ ಮಾಡಿದ ಪುರುಷ ಪರಸ್ತ್ರೀದೇಹದ ರೋಮಕೂಪಗಳಷ್ಟು ವರ್ಷ ನರಕದಲ್ಲಿ ಕ್ಲೇಶ ಪಡುವನು

ಗೃಹಸ್ಥನೂ ಕೂಡ ಅಮಾವಾಸ್ಯೆ ಹುಣ್ಣಿಮೆ ಚತುರ್ದಶೀ ಜನ್ಮದಿನ ಅಷ್ಟಮೀ ದಶಮೀ ಏಕಾದಶೀ ದ್ವಾದಶೀಯಂದು ಸ್ತ್ರೀಸಂಗ ಮಾಡದೆ

ಬ್ರಹ್ಮಚಾರಿಯಾಗಿರಬೇಕು.

ಅಪರಿಚಿತಸ್ತ್ರೀ, ಗರ್ಭಿಣಿಸ್ತ್ರೀ ಸಂಗ ಕೂಡದು. ವಿವಾಹ ಪೂರ್ವದಲ್ಲಿ ಮೈಥುನದಲ್ಲಿ ತೊಡಗಬಾರದು. ಪರಸ್ತ್ರೀಯರನ್ನು ಕಾಮದೃಷ್ಟಿಯಿಂದ ಕಾಣಬಾರದು. ಏಕಾಂತದಲ್ಲಿ ಪರಸ್ತ್ರೀಯೊಂದಿಗೆ ಏಕಾಸನದಲ್ಲಿ ಕೂಡ ಬಾರದು. ಯಾವಾಗಲೂ ಇಂದ್ರಿಯಗಳ ಮೇಲೆ ನಿಯಂತ್ರಣವಿರಬೇಕು. ಸ್ವಪ್ನದಲ್ಲಿಯೂ ಶುದ್ಧಮನಸ್ಸಿನವನಾಗಿರಬೇಕು. ಸ್ತ್ರೀಯರ ಸೌಂದರ್ಯ ವನ್ನು ಕುಡಿಯುವಂತೆ ನೋಡಬಾರದು.

## ಮಲಮೂತ್ರ ವಿಸರ್ಜನೆ

ಹೊಲಗದ್ದೆಗಳಲ್ಲಿ, ಜನರು ಓಡಾಡುವ ದಾರಿಯಲ್ಲಿ ಹೊಳೆನೀರಿನಲ್ಲಿ ದೇವಾಲಯದ ಪರಿಸರದಲ್ಲಿ ಹಸುಗಳು ಕಟ್ಟುವ ಸ್ಥಳದಲ್ಲಿ ಸ್ಮಶಾನದಲ್ಲಿ ಸಸ್ಯಗಳನ್ನು ಬೆಳೆಸಿರುವಲ್ಲಿ ಜನರು ವಿಶ್ರಾಂತಿಗೆಂದು ಬರುವ ಸ್ಥಳದಲ್ಲಿ ಮಲ ಮೂತ್ರವಿಸರ್ಜನೆ ಮಾಡಬಾರದು. ನಿಂತುಕೊಂಡು ಮೂತ್ರ ವಿಸರ್ಜನೆ ಮಾಡಬಾರದು.

ಸೂರ್ಯನಿಗೆ, ಬೆಂಕಿಗೆ, ಹಸುವಿಗೆ, ಬ್ರಾಹ್ಮಣರಿಗೆ ಎದುರಾಗಿ ಹಾಗೂ ಜನರು ಓಡಾಡುವ ದಾರಿಯಲ್ಲಿ ವಿಸರ್ಜನೆ ಮಾಡುವವನು ಆಯುಷ್ಯಹೀನನಾಗುತ್ತಾನೆ. ಹಗಲು ಉತ್ತರಕ್ಕೆ ಮುಖಮಾಡಿ ರಾತ್ರಿ ದಕ್ಷಿಣಕ್ಕೆ ಮುಖಮಾಡಿ ಮಲಮೂತ್ರ ವಿಸರ್ಜನೆ ಮಾಡುವವನ ಆಯುಷ್ಯ ಹಾನಿಯಾಗುವುದಿಲ್ಲ.

**ದೂರಾದಾವಸಥಾನ್ಮೂತ್ರಂ ದೂರಾತ್ಪಾದಾವಸೇಚನಮ್ ।**
**ಉಚ್ಛಿಷ್ಟೋತ್ಸರ್ಜನಂ ಚೈವ ದೂರೇ ಕಾರ್ಯಂ ಹಿತೈಷಿಣಾ ॥**

ಮಲಮೂತ್ರ ವಿಸರ್ಜನೆ, ಪಾದಪ್ರಕ್ಷಾಲನ, ಎಂಜಲು ಎಸೆಯುವುದು ಇವುಗಳನ್ನು ಮನೆಯಿಂದ ಹೊರಗೆ ದೂರದಲ್ಲಿ ಮಾಡಬೇಕು.

## ಸ್ನಾನ

ಶಿರಃಸ್ನಾನ ಮಾಡದೆ ದೇವಕಾರ್ಯ ಪಿತೃಕಾರ್ಯಗಳನ್ನು ಮಾಡಬಾರದು. ಎಂದೂ ನಗ್ನವಾಗಿ ಸ್ನಾನ ಮಾಡಬಾರದು. ರಾತ್ರಿಯಲ್ಲಿ ಅಕಾರಣ ಸ್ನಾನ ಮಾಡಬಾರದು. ಸ್ನಾನ ಮಾಡಿ ಒರೆಸಿಕೊಳ್ಳದೆ ಮೈ ಜಾಡಿಸಬಾರದು. ಸ್ನಾನ ಮಾಡದೆ ಸುಗಂಧದ್ರವ್ಯವನ್ನು ಹಚ್ಚಿಕೊಳ್ಳ ಬಾರದು.

## ಆಚಮನ

ಬ್ರಾಹ್ಮಣನು ಆಚಮನದಿಂದ ಶುದ್ಧಿಯಾಗುವನು. ಬ್ರಹ್ಮತೀರ್ಥ ದಿಂದ ಆಚಮನ ಮಾಡಬೇಕು. ಹೆಬ್ಬೆರಳಿನ ಮೂಲ ಮಣಿಗಂಟಿನ ಮೇಲೆ ಅಂಗೈ ಬುಡದ ಮಧ್ಯಭಾಗ ಬ್ರಾಹ್ಮತೀರ್ಥವೆನಿಸುವುದು. ಉಗುಳಿದಾಗ ಸೀನಿದಾಗ ಮೈಥುನದ ಬಳಿಕ ರಜಸ್ವಲೆಯನ್ನು ಕಂಡಾಗ ನಗ್ನನನ್ನು ಕಂಡಾಗ, ಹೊರಗೆ ಅಡ್ಡಾಡಿ ಬಂದಾಗ, ಮಲ-ಮೂತ್ರ ವಿಸರ್ಜನೆಯ ಬಳಿಕ ಆಚಮನ ಮಾಡಬೇಕು. ಆಚಮನದ ನೀರು ಹೃದಯದ ವರೆಗೆ ಹೋಗುವಷ್ಟಿರಬೇಕು. ಆಚಮನಕ್ಕೆ ನೀರಿಲ್ಲದಿದ್ದರೆ ಪ್ರಣವೋಚ್ಚಾರಣೆ ಮಾಡಿಕೊಂಡು ಬಲಕಿವಿಯನ್ನು ಮುಟ್ಟಬೇಕು. ಅಥವಾ ಸೂರ್ಯನನ್ನು ನೋಡಬೇಕು.

## ಅಧ್ಯಯನ

ತಪ್ಪದೆ ಸಚ್ಛಾಸ್ತ್ರ ಅಧ್ಯಯನ ಮಾಡುತ್ತಿರಬೇಕು. ಉಚ್ಛಿಷ್ಟನಾದಾಗ ಅಂದರೆ ಅಶುಚಿಯಾದಾಗ ಅಧ್ಯಯನ ಮಾಡಬಾರದು. ಅಪಾನ ವಾಯುವಿನ ದುರ್ವಾಸನೆಯಿರುವಾಗ ವೇದವನ್ನು ಮನಸ್ಸಿನಲ್ಲಿಯೂ ಚಿಂತಿಸಬಾರದು. ಇದು ಯಮನ ಮಾತು - ಯಾರು ಅಶುಚಿಯಾಗಿರು ವಾಗ, ಅನಧ್ಯಯನ ಕಾಲದಲ್ಲಿ ಮೋಹದಿಂದ ಶಾಸ್ತ್ರಾಧ್ಯಯನ ಪಾಠ ಪ್ರವಚನ ಮಾಡುವನು ಅವನ ಆಯುಷ್ಯ ಕ್ಷೀಣವಾಗುವುದು.

## ಗುರುಗಳೊಂದಿಗೆ...

**ಗುರುಣಾ ವೈರನಿರ್ಬಂಧಃ ನ ಕರ್ತವ್ಯಃ ಕದಾಚನ ।**
**ಅನುಮಾನ್ಯಃ ಪ್ರಸಾದ್ಯಶ್ಚ ಗುರುಃ ಕ್ರುದ್ಧೋ ಯುಧಿಷ್ಠಿರ ।**
**ಸಮ್ಯಗ್ ಮಿಥ್ಯಾಪ್ರವೃತ್ತೇಽಪಿ ವರ್ತಿತವ್ಯಂ ಗುರಾವಿಹ ।**
**ಗುರುನಿಂದಾ ದಹತ್ಯಾಯುರ್ಮನುಷ್ಯಾಣಾಂ ನ ಸಂಶಯಃ ॥**

ಗುರುಗಳೊಂದಿಗೆ ಎಂದೂ ವೈರ ಕಟ್ಟಿಕೊಳ್ಳಬಾರದು. ಗುರು ಕ್ರೋಧಗೊಂಡರೆ ಸತ್ಕರಿಸಬೇಕು. ಪ್ರಸನ್ನಗೊಳಿಸಬೇಕು. ಗುರುವು ನಮ್ಮ ವಿಷಯದಲ್ಲಿ ತಪ್ಪಿ ನಡೆದರೂ ನಾವು ತಾಳ್ಮೆಯಿಂದ ಅವರಲ್ಲಿ ನಡೆದುಕೊಳ್ಳಬೇಕು. ಗುರುನಿಂದೆ ಮನುಷ್ಯನ ಆಯುಷ್ಯವನ್ನೆ ಹರಣ ಮಾಡುತ್ತದೆ. ಸಂಶಯವಿಲ್ಲ.

## ಗೃಹಸ್ಥಾಶ್ರಮ

ಸತ್ಕುಲಪ್ರಸೂತರು, ಶುಭಲಕ್ಷಣಸಂಪನ್ನಳು, ವಯಸ್ಸಿನಲ್ಲಿ ತನಗಿಂತ ಕಿರಿಯಳು, ಒಳ್ಳೆ ನಕ್ಷತ್ರದಲ್ಲಿ ಹುಟ್ಟಿದವಳು ಸವರ್ಣಳಾದ ಹೆಣ್ಣನ್ನು ಮದುವೆಯಾಗಬೇಕು. ಹೀನಾಂಗಳು, ಅಧಿಕಾಂಗಳು, ಸಮಾನಪ್ರವರ ಗೋತ್ರದವಳು ತಾಯಿವಂಶದವಳು ತನಗಿಂತ ವಯಸ್ಸಿನಲ್ಲಿ ಹಿರಿಯಳು, ಮನೆಬಿಟ್ಟು ಬಂದು ಸನ್ಯಾಸಿಯಾದವಳು, ಮದುವೆಯಾಗಿರುವಳು, ಹೀನವರ್ಣದವಳು ಉತ್ತಮವರ್ಣದವಳು ಕುಲ ತಿಳಿಯದವಳು, ಹೀನ ಕುಲದವಳು, ವೇಶ್ಯೆ, ಕುಷ್ಠರೋಗಿ, ಅಪಸ್ಮಾರರೋಗದ ವಂಶದವಳು, ತೊನ್ನು, ಕ್ಷಯರೋಗದ ವಂಶದವಳು, ಮೈಯೆಲ್ಲ ಅಧಿಕ ರೋಮವುಳ್ಳವಳು, ಅತಿಸ್ಥೂಲಕಾಯದವಳು, ಲಜ್ಜೆಗೇಡಿಯಾದವಳು, ಸಹೋದರರ ಮಗಳು, ಕೆಂಜಡೆಯವಳು - ಇಂತಹವರನ್ನು ಮದುವೆಯಾಗಬಾರದು.

ವಿವಾಹಿತನಾದವನು ಪತ್ನಿಯೊಂದಿಗೆ ಯಜ್ಞಯಾಗಾದಿಗಳನ್ನು ಮಾಡಬೇಕು. ವೈಶ್ವದೇವ ಔಪಾಸನಗಳನ್ನು ಗೃಹಸ್ಥ ಮಾಡಬೇಕು.

ಸ್ತ್ರೀಯರಲ್ಲಿ ಈರ್ಷ್ಯೆ ತೋರಬಾರದು. ಎಲ್ಲ ಕಾಲದಲ್ಲಿ ಎಲ್ಲ ರೀತಿಯಿಂದಲೂ ಹೆಂಡತಿಯನ್ನು ರಕ್ಷಣೆ ಮಾಡಬೇಕು. ಮತ್ತೊಬ್ಬರಲ್ಲಿ ಹೊಟ್ಟೆಕಿಚ್ಚು ಪಡುವುದು ಆಯುಷ್ಯಹಾನಿಕರ.

**ಸಾಮುದ್ರೇಣಾಂಭಸಾ ಸ್ನಾನಂ ಕ್ಷೌರಂ ಶ್ರಾದ್ಧೇಷು ಭೋಜನಮ್ ।**
**ಅಂತರ್ವತ್ನೀಪತಿಃ ಕುರ್ವನ್ ನ ಪುತ್ರಫಲಮಶ್ನುತೇ ॥**

ಗರ್ಭಿಣಿಯ ಗಂಡನು ಸಮುದ್ರಸ್ನಾನ, ಕ್ಷೌರ, ಶ್ರಾದ್ಧಭೋಜನಗಳನ್ನು ಮಾಡಿದರೆ ಪುತ್ರಫಲವನ್ನು ಪಡೆಯುವುದಿಲ್ಲ.

ವಯಸ್ಸಾದ ಬಂಧು ಹಾಗೂ ಗೆಳೆಯ, ಗಂಡನಿಲ್ಲದ ಸಹೋದರಿಯರು, ಪಾಠ ಹೇಳಿದ ಗುರು, ಸತ್ಕುಲಪ್ರಸೂತ ಪಂಡಿತ ಇವರನ್ನೆಲ್ಲ ಗೃಹಸ್ಥನು ಮನೆಯಲ್ಲಿ ರಕ್ಷಣೆ ಮಾಡಬೇಕು. ಹಾಗೆಯೇ ತನ್ನ ಶಕ್ತಿಯಿದ್ದಷ್ಟು ಗತಿಯಿಲ್ಲದ ದರಿದ್ರರನ್ನು ಪೋಷಣೆ ಮಾಡಬೇಕು. ವಯಸ್ಸಾದ ಬಂಧುವು ಮನೆಯಲ್ಲಿದ್ದರೆ ಮಕ್ಕಳಿಗೆ ಸಂಸ್ಕಾರ ಬರುತ್ತದೆ. ತನಗೆ ಧೈರ್ಯ ಬರುತ್ತದೆ. ಗೆಳೆಯನಿದ್ದರೆ ತನಗೆ ಹಿತವನ್ನು ಬಯಸುತ್ತ ಸಹಾಯಕನಾಗುತ್ತಾನೆ. ಗಂಡನಿಲ್ಲದ ಸಹೋದರಿ ಸಹೋದರನಿಗೆ ಆಪತ್ತು ಬರದಿರುವಂತೆ ಎಚ್ಚರ ವಹಿಸುವುದಲ್ಲದೆ ಅವನ ಹಣ ಹಾಳಾಗದಂತೆ ಜೋಪಾನ ಮಾಡುತ್ತಾಳೆ. ಗುರುಗಳಿದ್ದರೆ ಮಕ್ಕಳಿಗೆ ಸಕಾಲದಲ್ಲಿ ಪಾಠ ಹಾಗೂ ಕಲಿಕೆಯ ಶಿಸ್ತು ರೂಢಿಯಾಗುತ್ತದೆ. ಸತ್ಕುಲಪ್ರಸೂತ ಪಂಡಿತನಿದ್ದರೆ ವೇದಶಾಸ್ತ್ರಗಳ ಶಿಕ್ಷಣ ದೊರೆತು ಮಕ್ಕಳು ಆಚಾರವಂತರು ಚಾರಿತ್ರ್ಯಸಂಪನ್ನರು ಸುಶಿಕ್ಷಿತರು ಆಗುವರು. ಅನಾಥರು ತನಗೆ ಪೋಷಣೆ ಮತ್ತು ಬದುಕು ಕೊಟ್ಟ ಈ ಪುಣ್ಯಾತ್ಮ ನೂರು ಕಾಲ ಸುಖವಾಗಿ ಬಾಳಲೆಂದು ಹರಸುತ್ತ ದೇವರಲ್ಲಿ ಪ್ರಾರ್ಥಿಸುತ್ತಾರೆ.

ಪಾರಿವಾಳ ಗಿಳಿ ಸಾರಿಕೆ ಮುಂತಾದ ಪಕ್ಷಿಗಳನ್ನು ಸಾಕಬಹುದು. ಹಾಗೆಯೇ ದೇವತಾಪ್ರತಿಮೆಗಳು, ಕನ್ನಡಿ, ಗಂಧದ ಮರ ಹೂಬಳ್ಳಿಗಳು ಶುದ್ಧವಾದ ನೀರು ಬಂಗಾರ ಬೆಳ್ಳಿ ಇದೆಲ್ಲ ಮನೆಗೆ ಮಂಗಲಕಾರಕ

ವಸ್ತುಗಳು. ಜಿರಳೆ ಮನೆಯಲ್ಲಿರುವುದು ಹೇಗೆ ಪಾಪಕಾರಣವಲ್ಲ, ಹಾಗೆ ಪಾರಿವಾಳ ಮೊದಲಾದ ಹಕ್ಕಿಗಳು ಮನೆಯಲ್ಲಿರುವುದು ದೋಷವಲ್ಲ, ಅಭ್ಯುದಯಕ್ಕೆ ಕಾರಣ.

ಹದ್ದು ಕಪೋತ ದುಂಬಿ ಕಾಗೆ ಮುಂತಾದವು ಮನೆಯಲ್ಲಿ ಬಂದರೆ ಶಾಂತಿ ಮಾಡಿಸಬೇಕು.

ಸಜ್ಜನರ ಶಾಪ ದೊಡ್ಡವರ ರೋದನ ಮನೆಗೆ ಅಮಂಗಲ. ದೊಡ್ಡವರ ಜೀವನರಹಸ್ಯಗಳನ್ನು ಎಂದೂ ಎಲ್ಲರಿಗೂ ತಿಳಿಯುವಂತೆ ಹೇಳಬಾರದು.

ಬ್ರಾಹ್ಮಣ ಹಾಗೂ ಶಿಲ್ಪಿಗಳಿಂದ ನಿರ್ಮಾಣಗೊಂಡ ಮನೆಯಲ್ಲಿ ಪ್ರಾಜ್ಞನಾದವನು ಸದಾ ವಾಸ ಮಾಡಬೇಕು.

ದೇವತಾಕಾರ್ಯ ಹಾಗೂ ಪಿತೃಕಾರ್ಯಗಳನ್ನು ಶಿರಸ್ಸ್ನಾನ ಮಾಡಿಯೇ ಆಚರಿಸಬೇಕು. ತೈಲಾಭ್ಯಂಗವನ್ನು ಹುಟ್ಟಿದ ದಿನ, ಅಷ್ಟಮೀ, ಚತುರ್ದಶಿ, ಅಮಾವಾಸ್ಯೆ ಪೌರ್ಣಮೀ ಮುಂತಾದ ಪರ್ವದಿನಗಳಲ್ಲಿ ಜನ್ಮನಕ್ಷತ್ರದ ದಿನ ಅಗ್ನಿದೇವತಾಕವಾದ ಕೃತ್ತಿಕಾನಕ್ಷತ್ರ ಪ್ರತ್ಯರಿ ತಾರೆಯನ್ನು (ಅಂದರೆ ತನ್ನ ಜನ್ಮನಕ್ಷತ್ರದಿಂದ ಆ ದಿನ ನಕ್ಷತ್ರದ ವರೆಗೆ ಎಣಿಸಿ ಅದನ್ನು ಒಂಬತ್ತು ಭಾಗವಾಗಿ ವಿಂಗಡಿಸಿ ಐದನೇ ಭಾಗ ಪ್ರತ್ಯರಿ ತಾರೆ) ಹಾಗೆ ಜ್ಯೋತಿಷದಲ್ಲಿ ನಿಷೇಧಿಸಿದ ತಿಥಿ ವಾರ ನಕ್ಷತ್ರ ದಿನಗಳನ್ನು ಬಿಟ್ಟು ಇತರ ಯೋಗ್ಯದಿನದಲ್ಲಿ ಮಾಡಬೇಕು. ಪೂರ್ವ ಅಥವಾ ಉತ್ತರಕ್ಕೆ ಮುಖ ಮಾಡಿಕೊಂಡು ಕ್ಷೌರವನ್ನು ಮಾಡಿಸಿಕೊಳ್ಳಬೇಕು. ಅದರಿಂದ ಆಯುಷ್ಯ ಪ್ರಾಪ್ತಿ.

## ನಿದ್ರೆ

ಸೂರ್ಯೋದಯ ಹಾಗೂ ಸೂರ್ಯಾಸ್ತದ ಕಾಲಕ್ಕೆ ಮಲಗಬಾರದು. ಆಯುಷ್ಯ ಹಾನಿಯಾಗುತ್ತದೆ. ಹಗಲೂ ಮಲಗಬಾರದು.

ಉತ್ತರ ಹಾಗು ಪಶ್ಚಿಮದಿಕ್ಕಿಗೆ ತಲೆಯಿಟ್ಟು ಮಲಗಬಾರದು. ಪೂರ್ವ ಅಥವಾ ದಕ್ಷಿಣ ದಿಕ್ಕಿಗೆ ತಲೆಯಿಟ್ಟು ಮಲಗಬೇಕು.

ಹರಿದಿರುವ ಕೊಳಕಾಗಿರುವ ಹಾಸಿಗೆಯಲ್ಲಿ ಮಲಗಬಾರದು. ಮುರಿದ ಮಂಚದಲ್ಲಿ ಮಲಗಬಾರದು. ತುಂಬ ಕತ್ತಲೆಯಲ್ಲಿ, ಸ್ತ್ರೀಯರು ಮಲಗಿರುವ ಕಡೆಯಲ್ಲಿ ಮಲಗಬಾರದು. ಜನರು ಓಡಾಡುವ ಸ್ಥಲದಲ್ಲಿ ಅಡ್ಡವಾಗಿ ಎಂದೂ ಮಲಗಬಾರದು. ನಗ್ನವಾಗಿ ಮಲಗಬಾರದು. ರಾತ್ರಿ ತುಂಬ ತಡವಾಗಿ ಮಲಗುವುದು ಮುಂಜಾನೆ ವಿಹಿತ ಕಾಲಕ್ಕಿಂತ ತುಂಬ ಬೇಗ ಏಳುವುದು ಸರಿಯಲ್ಲ.

## ಸಾಮಾನ್ಯ ನಿಯಮಗಳು

ಆಗ ತಾನೆ ಉದಿಸುತ್ತಿರುವ ಹಾಗು ಅಸ್ತಂಗತನಾಗುತ್ತಿರುವ ಸೂರ್ಯನನ್ನು ರಾಹು ಕೇತು ಗ್ರಹಗ್ರಸ್ತ ಸೂರ್ಯನನ್ನು ಗಗನದಲ್ಲಿ ನಡುನೆತ್ತಿಗೆ ಬಂದಿರುವ ಸೂರ್ಯನನ್ನು ನೀರಿನಲ್ಲಿ ಪ್ರತಿಬಿಂಬಿತ ಸೂರ್ಯನನ್ನು ನೋಡಬಾರದು.

ಅತಿ ಮುಂಜಾವಿನಲಿ ಸಂಜೆ ತುಂಬ ಸಮಯ ಮೀರಿದ ಮೇಲೆ ಸೂರ್ಯ ನೆತ್ತಿ ಸುಡುವ ನಡು ಮಧ್ಯಾಹ್ನದಲ್ಲಿ, ಅಪರಿಚಿತರೊಂದಿಗೆ, ನೀಚಪುರುಷರೊಂದಿಗೆ ಒಬ್ಬಂಟಿಯಾಗಿ ಅಲೆಯಬಾರದು.

ನಡು ಮಧ್ಯಾಹ್ನ, ರಾತ್ರಿ, ಅರ್ಧರಾತ್ರಿ, ಸಂಧ್ಯಾಕಾಲಗಳಲ್ಲಿ ನಾಲ್ಕು ರಸ್ತೆ ಸೇರುವಲ್ಲಿ ಹೋಗಬಾರದು.

ಇನ್ನೊಬ್ಬರು ತೊಟ್ಟ ವಸ್ತ್ರವನ್ನು, ಚಪ್ಪಲಿಯನ್ನು ಧರಿಸಬಾರದು. ಒಂದು ಪಾದವನ್ನು ಇನ್ನೊಂದು ಪಾದದಿಂದ ತಿಕ್ಕಿ ತೊಳೆದುಕೊಳ್ಳಬಾರದು.

ವ್ಯರ್ಥವಾಗಿ ಬೊಬ್ಬೆ ಹಾಕುವುದು, ಇನ್ನೊಬ್ಬರನ್ನು ನಿಂದಿಸುವುದು, ಚಾಡಿ ಹೇಳುವುದು, ಕೇಳುವುದು ಇವುಗಳನ್ನು ಮಾಡಬಾರದು.

ನಿತ್ಯದಲ್ಲಿ ಅಗ್ನಿಪರಿಚರ್ಯೆ, ಭಿಕ್ಷಾಪ್ರದಾನ ಮಾಡಬೇಕು.

ಹಲ್ಲುಜ್ಜುವಾಗ ಸಂಧ್ಯಾವಂದನೆ ಮಾಡುವಾಗ ಮಲ ಮೂತ್ರ ವಿಸರ್ಜನೆಯ ಸಮಯದಲ್ಲಿ ಮೌನವಾಗಿರಬೇಕು.

ಹಲ್ಲುಜ್ಜದೆ ದೇವರಪೂಜೆ ಮಾಡಬಾರದು. ಗುರುಗಳನ್ನು ಧಾರ್ಮಿಕರನ್ನು ವಿದ್ವಾಂಸರನ್ನು ವೃದ್ಧರನ್ನು ಹೊರತಾಗಿ ಬೇರೆ ಯಾರನ್ನೂ ದೇವರಪೂಜೆ ಮುಗಿಸದೆ ಭೇಟಿಯಾಗಲು ಹೋಗಬಾರದು. ಅಗ್ನಿ ಗೋ ಬ್ರಾಹ್ಮಣರನ್ನು ಅಪವಿತ್ರನಾದಾಗ ಮುಟ್ಟಬಾರದು. ಸೂರ್ಯ ಚಂದ್ರ ನಕ್ಷತ್ರಗಳನ್ನು ಅಪವಿತ್ರನಾದಾಗ ನೋಡಬಾರದು. ಒಡೆದಿರುವ ಮುರಿದಿರುವ ಮಣೆ ಮುಂತಾದ ಆಸನಗಳಲ್ಲಿ ಕೂಡಬಾರದು.

ಎಲ್ಲ ಪ್ರಾಣಗಳು ತಲೆಯನ್ನು ಆಶ್ರಯಿಸಿರುತ್ತವೆ. ಆದ್ದರಿಂದ ಅಶುಚಿಯಾದಾಗ ತಲೆಯನ್ನು ಮುಟ್ಟಿಕೊಳ್ಳಬಾರದು.

**ಕೇಶಗ್ರಹಂ ಪ್ರಹಾರಾಂಶ್ಚ ಶಿರಸ್ಯೇತಾನ್ ವಿವರ್ಜಯೇತ್ ॥**

ಮತ್ತೊಬ್ಬರ ತಲೆಗೂದಲನ್ನು ಹಿಡಿದು ಎಳೆಯಬಾರದು. ತಲೆಗೆ ಹೊಡೆಯಬಾರದು. ತಲೆಯ ಮೇಲೆ ತುಂಬ ಹೊತ್ತು ಸ್ನಾನ ಮಾಡಬಾರದು. ಎರಡೂ ಕೈಗಳಿಂದ ಒಟ್ಟಿಗೆ ತಲೆ ತುರಿಸಿಕೊಳ್ಳಬಾರದು.

ದೀರ್ಘಾಯುಷ್ಯವನ್ನು ಬಯಸುವವನು ಬ್ರಾಹ್ಮಣ ಕ್ಷತ್ರಿಯ ಸರ್ಪ ಈ ಮೂವರನ್ನು ಅವರು ಎಷ್ಟೇ ದೀನರಾಗಿದ್ದರೂ ಅವಮಾನಿಸಬಾರದು. ಕೋಪಗೊಂಡ ಸರ್ಪ ನೋಟದಿಂದಲೆ ನಮ್ಮನ್ನು ಕೊಲ್ಲುತ್ತದೆ. ಕುಪಿತನಾದ ಕ್ಷತ್ರಿಯ ಮುಟ್ಟಿ ಕೊಲ್ಲುತ್ತಾನೆ. ಕೋಪಗೊಂಡ ಬ್ರಾಹ್ಮಣ ನೊಂದ ಮನಸ್ಸಿನಿಂದಲೆ ನೋಟದಿಂದಲೇ ಕುಲವನ್ನೆ ಕೊಲ್ಲುತ್ತಾನೆ.

ಕೆಂಪು ಬಣ್ಣದ ಹೂಮಾಲೆಯನ್ನು ಧರಿಸಬಾರದು. ಬಿಳಿಬಣ್ಣದ ಹೂಮಾಲೆಯನ್ನು ಧರಿಸಬೇಕು. ತಾವರೆ-ನೈದಿಲೆಗಳ ಮಾಲೆಯನ್ನು ಧರಿಸಬಾರದು. ಬಂಗಾರದ ಮಾಲೆ ಧರಿಸಬಹುದು. ಅದೆಂದೂ ದುಷ್ಟವಾಗುವುದಿಲ್ಲ.

## ವ್ಯರ್ಥವಾಗಿ ಉಪವಾಸವನ್ನು ಮಾಡಬಾರದು.

ಹಗಲು ಮೈಥುನ ಮಾಡಬಾರದು. ಕನ್ಯಾಸಂಗ, ರಜಸ್ವಲಾಸಂಗ, ಪತಿತಕನ್ಯಾಸಂಗ ಮಾಡಬಾರದು. ಹೀಗೆ ನಡೆದುಕೊಳ್ಳುವುದರಿಂದ ಆಯುಷ್ಯ ವೃದ್ಧಿಯಾಗುವುದು. ಅಗಮ್ಯಸ್ತ್ರೀಯರು, ರಾಜಪತ್ನಿ, ಗೆಳತಿ, ವೈದ್ಯರ ಪತ್ನಿ, ಭೃತ್ಯರ ಪತ್ನಿ, ಬಂಧುಗಳ ಬ್ರಾಹ್ಮಣರುಗಳ ಪತ್ನಿ, ರಕ್ಷಣೆ ಕೋರಿ ಬಂದ ಸ್ತ್ರೀಯರ ಸಂಗ ಮಾಡಬಾರದು. ಹೀಗೆ ಸಂಯಮದಿಂದ ಇರುವುದರಿಂದ ತುಂಬ ಆಯುಷ್ಯ ಪಡೆಯುತ್ತಾನೆ.

ಸಂಧ್ಯಾಕಾಲದಲ್ಲಿ ನಿದ್ರೆ, ವಿದ್ಯಾಭ್ಯಾಸ, ಆಹಾರಸೇವನೆ, ಮಲವಿಸರ್ಜನೆ ಮಾಡದೆ ಇರುವುದರಿಂದ ಆಯುಷ್ಯವೃದ್ಧಿಯಾಗುತ್ತದೆ.

ರಾತ್ರಿಯಲ್ಲಿ ಪಿತೃಕಾರ್ಯ, ರಾತ್ರಿ ಮನೆಯಲ್ಲಿ ಸುಮ್ಮನೆ ತಲೆಯ ಮೇಲೆ ಸ್ನಾನ ಮಾಡಬಾರದು. ರಾತ್ರಿ ತಲೆಗೂದಲಿಗೆ ಎಣ್ಣೆ ಹಚ್ಚಿ ಬಾಚಿಕೊಳ್ಳಬಾರದು.

ಊಟ ಮಾಡಿದ ಕೂಡಲೆ ಮೈಥುನ ಮಾಡಬಾರದು. ಓಡಬಾರದು. ಶ್ರಮದ ಕೆಲಸ ಮಾಡಬಾರದು.

ಸಜ್ಜನರನ್ನು ಗುರುಗಳನ್ನು ವಯಸ್ಸಿನಲ್ಲಿ ಹಿರಿಯರನ್ನು ಕುಲಸ್ತ್ರೀಯನ್ನು ನಿಂದಿಸಬಾರದು.

ಮುಖಕ್ಷೌರವೂ ಸೇರಿದಂತೆ ಕ್ಷೌರ ಮಾಡಿಕೊಂಡು ಸ್ನಾನ ಮಾಡದೆ ಇರುವುದು, ಅತಿಯಾದ ಆಸೆ ಎಲ್ಲವೂ ಆಯುಷ್ಯವನ್ನು ನಾಶ ಮಾಡುತ್ತದೆ.

ಬ್ರಾಹ್ಮಣರನ್ನು ಚೆನ್ನಾಗಿ ಪೂಜಿಸುತ್ತಿರಬೇಕು. ಸ್ನಾನ ಮಾಡಿ ದೇವರಿಗೆ ನಮಸ್ಕರಿಸಬೇಕು. ಗುರುಗಳನ್ನು ಕಂಡಾಗ ಗೋತ್ರ-ಪ್ರವರಗಳನ್ನು ಹೇಳಿಕೊಂಡು ವಿಧಿವಿಹಿತ ರೀತಿಯಲ್ಲಿ ನಮಸ್ಕಾರ ಮಾಡಬೇಕು.

ನಿಮಂತ್ರಣವಿಲ್ಲದ ತಾಣಕ್ಕೆ ಊಟಕ್ಕೆ ಹೋಗಬಾರದು. ಯಜ್ಞ ನಡೆಯುವಲ್ಲಿ ಹೋಗಿ ಭಾಗವಹಿಸಬೇಕು. ಅಲ್ಲಿ ಪೂಜೆ ಸಲ್ಲಿಸದೆ ಬಂದರೆ ಆಯುಷ್ಯ ಹಾನಿಯಾಗುವುದು.

ಆಪತ್ತಿಲ್ಲದಿರುವಾಗ ನಿಮಂತ್ರಣವಿಲ್ಲದ ಶ್ರಾದ್ಧಭೋಜನಕ್ಕೆ ಹೋಗಬಾರದು. ಏಕೋದ್ದಿಷ್ಟ ಶ್ರಾದ್ಧ ಭೋಜನಕ್ಕೆ ಹೋಗಬಾರದು. ಸಪಿಂಡೀಕರಣದ ಭೋಜನಕ್ಕೆ ಹೋಗಬಾರದು.

ಅಪರಾಹ್ಣ ಕಾಲದಲ್ಲಿ ಮನೆಯಲ್ಲಿದ್ದು ತಂದೆತಾಯಿಗಳು ಹೇಳಿದ ಕೆಲಸವನ್ನು ಮಾಡಿಕೊಂಡು ಹಿತವಾಗಿರಬೇಕು.

**ಪುರಾಣಮಿತಿಹಾಸಾಶ್ಚ ತಥಾಽಽಖ್ಯಾನಾನಿ ಯಾನಿ ಚ ।**
**ಮಹಾತ್ಮನಾಂ ಚ ಚರಿತಂ ಶ್ರೋತವ್ಯಂ ನಿತ್ಯಮೇವ ತೇ ॥**

ಪುರಾಣ ಇತಿಹಾಸ ಆಖ್ಯಾನಗಳನ್ನು ನಿತ್ಯ ಶ್ರವಣ ಮಾಡಬೇಕು. ಮಹಾತ್ಮರ ಚರಿತ್ರೆಗಳನ್ನು ಕೇಳಿ ತಿಳಿಯುತ್ತಿರಬೇಕು. ಮಾನ್ಯರನ್ನು ಸನ್ಮಾನಿಸಬೇಕು. ನಿಂದನೀಯರನ್ನು ನಿಂದಿಸಬೇಕು. ಗೋಬ್ರಾಹ್ಮಣರ ರಕ್ಷಣೆಗಾಗಿ ರಾಜನಾದವನು ಪ್ರಾಣದ ಹಂಗುತೊರೆದು ಕಾದಾಡಬೇಕು. ದರಿದ್ರರಾದ ಬ್ರಾಹ್ಮಣರನ್ನು ಎಂದಿಗೂ ತಿರಸ್ಕರಿಸಬಾರದು. ದಾರಿದ್ರ್ಯವನ್ನು ಬ್ರಾಹ್ಮಣರು ಕೇಳಿ ಪಡೆದಿರುವುದು!

## ಆಚಾರದಿಂದ ಆಯುಷ್ಯ

**ಆಚಾರೋ ಭೂತಿಜನನಃ ಆಚಾರಃ ಕೀರ್ತಿವರ್ಧನಃ ।**
**ಆಚಾರಾದ್ ವರ್ಧತೇ ಹ್ಯಾಯುಃ ಆಚಾರೊ ಹಂತ್ಯಲಕ್ಷಣಮ್ ।**

**ಆಗಮಾನಾಂ ಹಿ ಸರ್ವೇಷಾಂ ಆಚಾರಃ ಶ್ರೇಷ್ಠ ಉಚ್ಯತೇ ।**
**ಆಚಾರಪ್ರಭವೋ ಧರ್ಮಃ ಧರ್ಮಾದಾಯುರ್ವಿವರ್ಧತೇ ॥**

ಸದಾಚಾರವೇ ಸಿರಿಸಂಪದಾಸ್ಪದವು. ಆಚಾರವೇ ಕೀರ್ತಿ ವರ್ಧನವು. ಆಚಾರದಿಂದ ಆಯುಷ್ಯವೃದ್ಧಿ. ಆಚಾರವು ದುರ್ಲಕ್ಷಣವನ್ನು ನಾಶಮಾಡುತ್ತದೆ. ಎಲ್ಲ ಆಗಮಗಳಲ್ಲಿ ಆಚಾರವೇ ಶ್ರೇಷ್ಠವೆಂದು ಹೇಳಲಾಗಿದೆ. ಆಚಾರದಿಂದ ಪುಣ್ಯ. ಪುಣ್ಯದಿಂದ ಆಯುಷ್ಯಪ್ರಾಪ್ತಿ.

ಎಲ್ಲರ ಮೇಲೆ ಅನುಕಂಪದಿಂದ ನಾಲ್ಮೊಗ ಬೊಮ್ಮ ಉಪದೇಶಿಸಿದ ಈ ದೀರ್ಘಾಯುಷ್ಯದ ರಹಸ್ಯವು ಯಶಸ್ಸು ಆಯುಷ್ಯ, ಸ್ವರ್ಗ ಹಾಗು ಕಲ್ಯಾಣಸಾಧಕ.

ಇದರ ಶ್ರವಣ ಕೀರ್ತನ ಮಾಡುವವನು ಸದಾಚಾರಪರನಾಗಿ ಶುಭಲೋಕವನ್ನು ಸೇರುತ್ತಾನೆ.

ಶ್ರೀಮನ್ ಮಹಾಭಾರತದ ಅನುಶಾಸನ ಪರ್ವದ ದಾನ ಧರ್ಮ ಪರ್ವದಲ್ಲಿ ನೂರ ಅರವತ್ತೊಂದನೆಯ ಅಧ್ಯಾಯ ಸಮಾಪ್ತಿ

---

**ಆಯುಃಸತ್ವಬಲಾರೋಗ್ಯ ಸುಖಪ್ರೀತಿವಿವರ್ಧನಾಃ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾಆಹಾರಾಃ ಸಾತ್ತ್ವಿಕಪ್ರಿಯಾಃ॥**

**(ಭ.ಗೀ. ೧೭-೮)**

ಆಯುಸ್ಸು, ಚಿತ್ತಶುದ್ಧಿ, ಬಲ, ಆರೋಗ್ಯಗಳನ್ನು ಹೆಚ್ಚಿಸುವ, ಒಮ್ಮೆ ಸೇವಿಸಿದರೂ ಬಹುಕಾಲ ಸುಖಕೊಡುವ ತುಪ್ಪ ಮೊದಲಾದ ಪದಾರ್ಥಗಳು, ತತ್ಕಾಲದಲ್ಲಿಯೂ ಸುಖ ನೀಡುವ ರುಚಿಕರವೂ ಸ್ನಿಗ್ಧವೂ ಬಹುಕಾಲ ಒಳ್ಳೆಯ ಪರಿಣಾಮ ನೀಡುವ, ಒಮ್ಮೆ ಸೇವಿಸಿದರೆ ಇನ್ನೂ ಬೇಕೆನಿಸುವ ಆಹಾರಗಳು ಸಾತ್ವಿಕಸ್ವಭಾವದವರಿಗೆ ಪ್ರಿಯವಾದವು.

# ಮನುಸ್ಮೃತಿಯಲ್ಲಿ ದೀರ್ಘಾಯುಷ್ಯದ ರಸಧಾರೆ

**ಬಾಲಾರ್ಕೋ ಯಜ್ಞಧೂಮಶ್ಚ ಬಾಲಾ ಸ್ತ್ರೀ ನಿರ್ಝರೋದಕಮ್ ।**
**ಆಯುಷ್ಯವರ್ಧಕಂ ನಿತ್ಯಂ ರಾತ್ರೌ ಕ್ಷೀರಾನ್ನ ಭೋಜನಮ್ ॥**

ಪ್ರಾತಃಕಾಲದ ಹಾಗೂ ಸಾಯಂಕಾಲದ ಸೂರ್ಯ, ಯಜ್ಞದ ಹೊಗೆ, ತನಗಿಂತ ಕಡಿಮೆ ವಯಸ್ಸಿನ ಹೆಂಡತಿ, ಹರಿಯುವ ನದೀನೀರು ರಾತ್ರಿ ನಿತ್ಯದಲ್ಲಿ ಹಾಲನ್ನದ ಊಟ ಇವು ಆಯುಷ್ಯವರ್ಧಕ.

**ವೃದ್ಧಾರ್ಕೋ ಪ್ರೇತಧೂಮಶ್ಚ ವೃದ್ಧಾ ಸ್ತ್ರೀ ಪಲ್ವಲೋದಕಮ್ ।**
**ಆಯುಷ್ಯನಾಶಕಂ ನಿತ್ಯಂ ರಾತ್ರೌ ದಧ್ಯನ್ನಭೋಜನಮ್ ॥**

ನೆತ್ತಿ ಮೇಲೆ ಬಂದ ಬೆಳೆದ ಸೂರ್ಯ, ಸುಡುವ ಹೆಣದ ಹೊಗೆ, ತನಗಿಂತ ಹಿರಿಯ ವಯಸ್ಸಿನ ಹೆಂಡತಿ, ನಿಂತ ಕೊಳಕು ನೀರು, ರಾತ್ರಿ ನಿತ್ಯವೂ ಮೊಸರನ್ನದ ಊಟ ಇವು ಆಯುಷ್ಯ ನಾಶಕ.

**ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ।**
**ಚತ್ವಾರಿ ತಸ್ಯ ವರ್ಧಂತೇ ಆಯುರ್ವಿದ್ಯಾಯಶೋ ಬಲಮ್ ॥**

ಹಿರಿಯರಿಗೆ ನಿತ್ಯ ನಮಸ್ಕಾರ ಮಾಡುವ ಸ್ವಭಾವದವನಿಗೆ, ನಿತ್ಯವೃದ್ಧರ ಸೇವೆ ಮಾಡುವವನಿಗೆ ಆಯುಷ್ಯ ವಿದ್ಯೆ ಯಶಸ್ ಬಲ ಈ ನಾಲ್ಕು ಅಭಿವೃದ್ಧಿಯಾಗುತ್ತವೆ.

**ನ ವೈ ಸ್ವಯಂ ತದಶ್ನೀಯಾತ್ ಅತಿಥಿಂ ಯನ್ನ ಭೋಜಯೇತ್ ।**
**ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ವಾಽತಿಥಿಪೂಜನಮ್ ॥**

ಅತಿಥಿಗೆ ಊಟ ಹಾಕದೆ ನಾವೊಬ್ಬರೇ ಉಣಬಾರದು. ಅತಿಥಿಪೂಜೆ ಸಂಪತ್ತಿಗೆ ಯಶಸ್ಸಿಗೆ ಆಯುಷ್ಯಕ್ಕೆ ಸ್ವರ್ಗಕ್ಕೆ ಸಾಧನ.

**ಸರ್ವಲಕ್ಷಣಹೀನೋಽಪಿ ಯಃ ಸದಾಚಾರವಾನ್ ನರಃ।**
**ಶ್ರದ್ದಧಾನೋಽನಸೂಯಶ್ಚ ಶತಂ ವರ್ಷಾಣಿ ಜೀವತಿ ॥**

ಎಲ್ಲ ಲಕ್ಷಣಗಳು ಇರದಿದ್ದರೂ ಸದಾಚಾರವಂತನೂ ಶ್ರದ್ಧಾವಂತನು, ಅಸೂಯೆಯಿಲ್ಲದವನು ಆಗಿದ್ದರೆ ಆ ನರನು ನೂರು ವರ್ಷ ಬದುಕುತ್ತಾನೆ.

**ಋಷಯೋ ದೀರ್ಘಸಂಧ್ಯತ್ವಾತ್ ದೀರ್ಘಮಾಯುರವಾಪ್ನುಯುಃ।**
**ಪ್ರಜ್ಞಾಂ ಯಶಶ್ಚ ಕೀರ್ತಿಂ ಚ ಬ್ರಹ್ಮವರ್ಚಸಮೇವ ಚ ॥**

ಋಷಿಗಳು ದೀರ್ಘಕಾಲ ಸಂಧ್ಯಾವಂದನೆ ಮಾಡುತ್ತಿದ್ದುದರಿಂದ ದೀರ್ಘಾಯುಷ್ಯ, ಪ್ರಜ್ಞೆ, ಯಶಸ್ಸು, ಕೀರ್ತಿ, ಬ್ರಹ್ಮವರ್ಚಸ್ಸುಗಳನ್ನು ಪಡೆಯುತ್ತಿದ್ದರು.

**ದುರಾಚಾರೀ ಚ ಪುರುಷೋ ಲೋಕೇ ಭವತಿ ನಿಂದಿತಃ।**
**ದುಃಖಭಾಗೀ ಚ ಸತತಂ ವ್ಯಾಧಿತೋಽಲ್ಪಾಯುರೇವ ಚ ॥**

ದುರಾಚಾರಿಯಾದ ಪುರುಷ ಲೋಕದಲ್ಲಿ ನಿಂದಿತನಾಗುವುದಲ್ಲದೆ ಸತತವಾಗಿ ದುಃಖಭಾಗಿಯಾಗುವನು. ವ್ಯಾಧಿಯಿಂದ ಅಲ್ಪಾಯುವಾಗುತ್ತಾನೆ.

**ರಜಸಾಽಭಿಪ್ಲುತಾಂ ನಾರೀಂ ನರಸ್ಯ ಹ್ಯುಪಗಚ್ಛತಃ।**
**ಪ್ರಜ್ಞಾತೇಜೋ ಬಲಂ ಚಕ್ಷುರಾಯುಶ್ಚೈವ ಪ್ರಹೀಯತೇ ॥**

ರಜಸ್ವಲೆಯಾದ ಹೆಣ್ಣಿನ ಸಂಗ ಮಾಡುವವನ ಪ್ರಜ್ಞಾ, ತೇಜಸ್, ಬಲ, ಕಣ್ಣಿನಶಕ್ತಿ ಆಯುಷ್ಯವಿದೆಲ್ಲವೂ ನಾಶವಾಗುತ್ತದೆ.

**ಅಧಿತಿಷ್ಠೇನ್ನ ಕೇಶಾಂಸ್ತು ನ ಭಸ್ಮಾಸ್ಥಿಕಪಾಲಿಕಾಃ।**
**ನ ಕಾರ್ಪಾಸಾಸ್ಥಿ ನ ತುಷಾನ್ ದೀರ್ಘಮಾಯುರ್ಜಿಜೀವಿಷುಃ॥**

ದೀರ್ಘಾಯುಷಿಯಾಗಿ ಬದುಕಲು ಬಯಸುವವನು ಕೂದಲು, ಬೂದಿ, ಮೂಳೆ, ಮಡಕೆಯ ಚೂರು, ಹತ್ತಿ, ಹೊಟ್ಟುಗಳನ್ನು ತುಳಿಯಬಾರದು.

**ಯಜ್ಞೋಽನೃತೇನ ಕ್ಷರತಿ ತಪಃ ಕ್ಷರತಿ ವಿಸ್ಮಯಾತ್।**
**ಆಯುರ್ವಿಪ್ರಾಪವಾದೇನ ದಾನಂ ಚ ಪರಿಕೀರ್ತನಾತ್॥**

ಯಜ್ಞವು ಸುಳ್ಳಿನಿಂದ, ತಪಸ್ಸು ಕಾಮದಿಂದ, ಆಯುಷ್ಯವು ಬ್ರಾಹ್ಮಣನಿಗೆ ಮಾಡುವ ಅಪಮಾನದಿಂದ, ದಾನವು ಹೇಳಿಕೊಳ್ಳುವುದರಿಂದ ಹಾಳಾಗುತ್ತದೆ.

**ಅನಭ್ಯಾಸೇನ ವೇದಾನಾಮಾಚಾರಸ್ಯ ಚ ವರ್ಜನಾತ್।**
**ಆಲಸ್ಯಾತ್ ಅನ್ನದೋಷಾಚ್ಚ ಮೃತ್ಯುರ್ವಿಪ್ರಾನ್ ಜಿಘಾಂಸತಿ॥**

ವೇದಗಳನ್ನು ಅಭ್ಯಾಸಮಾಡದೇ ಇರುವುದರಿಂದ, ಆಚಾರವನ್ನು ಬಿಡುವುದರಿಂದ, ಸೋಮಾರಿತನದಿಂದ, ಅನ್ನದ ದೋಷದಿಂದ ಬ್ರಾಹ್ಮಣರನ್ನು ಮೃತ್ಯುವು ಕೊಲ್ಲಲು ಬಯಸುತ್ತದೆ.

**ಇಂದ್ರಿಯಾಣಿ ಯಶಃ ಸ್ವರ್ಗಮಾಯುಃ ಕೀರ್ತಿಂ ಪ್ರಜಾಃ ಪಶೂನ್।**
**ಹಂತಿ - ಅಲ್ಪದಕ್ಷಿಣೋ ಯಜ್ಞಃ ತಸ್ಮಾನ್ನಾಲ್ಪಧನೋ ಯಜೇತ್॥**

ದೊಡ್ಡ ಯಜ್ಞಮಾಡಿಸಿ ಕಡಿಮೆ ದಕ್ಷಿಣೆ ಕೊಟ್ಟರೆ ಆ ಯಜ್ಞ ಆ ಯಜಮಾನನ ಇಂದ್ರಿಯಗಳನ್ನು ಯಶಸ್ಸನ್ನು ಸ್ವರ್ಗವನ್ನು ಆಯುಷ್ಯವನ್ನು ಕೀರ್ತಿಯನ್ನು, ಸಂತಾನವನ್ನು, ಪಶುಸಂಪತ್ತನ್ನು ಹಾನಿಗೊಳಿಸುತ್ತದೆ. ಆದ್ದರಿಂದ ಅಲ್ಪಧನವುಳ್ಳವನು ದೊಡ್ಡ ದೊಡ್ಡ ಯಜ್ಞಮಾಡಿಸಬಾರದು.

# ಮಹಾಭಾರತದ ಬೇರೆ ಪರ್ವಗಳಲ್ಲಿ...

**ಅತಿಮಾನೋಽತಿವಾದಶ್ಚ ತಥಾಽತ್ಯಾಗಃ ನರಾಧಿಪ ।**
**ಕ್ರೋಧಶ್ಚ ಆತ್ಮವಿಧಿತ್ಸಾ ಚ ಮಿತ್ರದ್ರೋಹಶ್ಚ ತಾನಿ ಷಟ್ ।**
**ಏತ ಏವಾಸಯಸ್ತೀಕ್ಷ್ಣಾಃ ಕೃಂತಂತ್ಯಾಯೂಂಷಿ ದೇಹಿನಾಮ್ ॥**

**ಮ.ಭಾ.ಉ.೩೭-೧೦,೧೧**

ಅತಿಯಾದ ಅಹಂಕಾರ, ಅತಿಯಾದ ಮಾತು, ಅತಿಶಯವಾದ ಅಪರಾಧ, ಕ್ರೋಧ, ಶಿಶ್ನೋದರಪರಾಯಣತೆ ಮಿತ್ರದ್ರೋಹ ಈ ಆರು ತೀಕ್ಷ್ಣವಾದ ಕತ್ತಿಗಳು ಮನುಷ್ಯರ ಆಯುಷ್ಯವನ್ನು ನಾಶಪಡಿಸುತ್ತವೆ.

**ಗುಣಾಶ್ಚ ಷಣ್ಮಿತಭುಕ್ತಂ ಭಜಂತೇ**
**ಆರೋಗ್ಯಮಾಯುಶ್ಚ ಬಲಂ ಸುಖಂ ಚ ।**
**ಅನಾಮಯಂ ಚಾಸ್ಯ ಭವತ್ಯಪತ್ಯಂ**
**ನ ಚೈವಮಾದ್ಯೂನ ಇತಿ ಕ್ಷಿಪಂತಿ ॥**

ಮಿತವಾಗಿ ಆಹಾರ ಸೇವಿಸುವವನನ್ನು ಈ ಆರು ಗುಣಗಳು ಹೊಂದುತ್ತವೆ- ಆರೋಗ್ಯ, ಆಯುಷ್ಯ, ಬಲ, ಸುಖ, ರೋಗ ರಹಿತವಾದ ಸಂತಾನ. ಬಹುವಾಗಿ ತಿನ್ನುವವನನ್ನು ಆ ಆರು ಗುಣಗಳು ಹೊಂದುವುದಿಲ್ಲ.

**ಅಸತ್ಕರ್ಮಾಣಿ ಕುರ್ವಾಣಾಃ ತಿರ್ಯಗ್ಯೋನಿಷು ಚಾಪರೇ ।**
**ಕ್ಷೀಣಾಯುಷಸ್ತಥಾಚಾನ್ಯೇ ನಶ್ಯಂತಿ ಪೃಥಿವೀತಲೇ ॥**

ಮ.ಭಾ.ಶಾಂ. ೧೯೧-೨೩

ಪವಿತ್ರವಾದ ಈ ಕರ್ಮಭೂಮಿಯಲ್ಲಿ ಜನಿಸಿ ಕೆಟ್ಟ ಕೆಲಸಗಳನ್ನು ಮಾಡುವವರಲ್ಲಿ ತಿರ್ಯಗ್ ಯೋನಿಯಲ್ಲಿ ಕೆಲವರು ಹುಟ್ಟುವರು. ಮತ್ತೆ ಕೆಲವರು ಇಲ್ಲಿ ಆಯುಷ್ಯವನ್ನು ಕಳೆದುಕೊಂಡು ನಾಶವಾಗುತ್ತಾರೆ.

**ಲೋಷ್ಟಮರ್ದೀ ತೃಣಚ್ಛೇದೀ ನಖಖಾದೀ ತು ಯೋ ನರಃ।**
**ನಿತ್ಯೋಚ್ಛಿಷ್ಟಃ ಸಕಂಸುಕೋ ನೇಹಾಯುರ್ವಿಂದತೇ ಮಹತ್ ॥**

**ಮ.ಭಾ.ಶಾಂ. ೧೯೨-೧೩**

ವ್ಯರ್ಥವಾಗಿ ಮಣ್ಣನ್ನು ಮರ್ದನಮಾಡುವವನು, ಹುಲ್ಲನ್ನು ಕತ್ತರಿಸುವವನು, ಉಗುರು ಕಚ್ಚುವವನು, ನಿತ್ಯದಲ್ಲಿ ಉಚ್ಛಿಷ್ಟನಾಗಿರುವವನು ಕಾಮಲೋಭಾದಿವಶನಾದವನು ಹೆಚ್ಚಿನ ಆಯುಷ್ಯವನ್ನು ಪಡೆಯುವುದಿಲ್ಲ.

**ಶ್ಮಶ್ರುಕರ್ಮಣಿ ಸಂಪ್ರಾಪ್ತೇ ಕ್ಷುತೇ ಸ್ನಾನೇಽಥ ಭೋಜನೇ।**
**ವ್ಯಾಧಿತಾನಾಂ ಚ ಸರ್ವೇಷಾಮಾಯುಷ್ಯಮಭಿನಂದನಮ್ ॥**

**ಮ.ಭಾ.ಶಾಂ-೧೯೨-೨೩**

ಕ್ಷೌರ ಮಾಡಿಸಿಕೊಂಡ ಬಳಿಕ, ಸೀನಿದ ನಂತರ, ಸ್ನಾನಾನಂತರ, ಊಟದ ಬಳಿಕ ಹಾಗೂ ವ್ಯಾಧಿಗೊಳಗಾದವರು ಬ್ರಾಹ್ಮಣರನ್ನು ನಮಸ್ಕಾರ ಮಾಡಿ ಸಂತೋಷಪಡಿಸಿದರೆ ಆಯುಷ್ಯವೃದ್ಧಿಯಾಗುತ್ತದೆ.



---

**ಕಾಮಾತ್ಕ್ರೋಧಜ್ವರೋ ನಶ್ಯೇತ್ ಕ್ರೋಧಾತ್ಕಾಮಜ್ವರಸ್ತಥಾ।**
**ಘಾತಿತಾಭ್ಯಾಮುಭಾಭ್ಯಾಂ ಚ ಕಾಮಕ್ರೋಧಜ್ವರಕ್ಷಯಃ ॥**

# ಭಾಗವತದಲ್ಲಿ ಆಯುಷ್ಯದ ಬಗ್ಗೆ...

**ಮನಸಶ್ಚಾಜಯಾದ್ ರೋಗಾತ್ ಪುಂಸಾಂ ಚೈವಾಯುಷಃ ಕ್ಷಯಾತ್ ।**
**ಕಲೇರ್ದೋಷಬಹುತ್ವಾಚ್ಚ ಸಪ್ತಾಹಶ್ರವಣಂ ಮತಮ್ ॥**

**(ಭಾಗವತ ಮಹಾತ್ಮ್ಯ-೩-೪೯)**

ಮನೋಜಯವಿಲ್ಲದುದರಿಂದ, ರೋಗಗಳು ಬರುವುದರಿಂದ, ಆಯುಷ್ಯ ಹಾನಿಯಾಗುವುದರಿಂದ, ಕಲಿಯುಗದಲ್ಲಿ ದೋಷಗಳು ಬಹಳವಾದುದರಿಂದ ಭಾಗವತ ಸಪ್ತಾಹಶ್ರವಣವು ವಿಹಿತವಾಗಿದೆ. ಏಳು ದಿವಸವಾದರೂ ಸಾಧ್ಯವಾದಷ್ಟು ನಿಯಮದಿಂದಿದ್ದು ಭಾಗವತ ಕೇಳಲಿ ಎಂದು ಜ್ಞಾನಿಗಳ ಅಭಿಪ್ರಾಯ.

**ಮಂದಸ್ಯ ಮಂದಪ್ರಜ್ಞಸ್ಯ ಪ್ರಾಯೋ ಮಂದಾಯುಷಶ್ಚವೈ ।**
**ನಿದ್ರಯಾ ಹ್ರೀಯತೇ ನಕ್ತಂ ದಿವಾ ಚಾಪಥ್ಯಕರ್ಮಭಿಃ ॥**

**(ಭಾಗ-೧-೧೬-೧೦)**

ಪ್ರಾಯಃ ಮಾನವ ಜ್ಞಾನಕಾರ್ಯದಲ್ಲಿ ಸೋಮಾರಿ. ಬುದ್ಧಿಶಕ್ತಿಯೂ ಕಡಿಮೆ. ಆಯುಷ್ಯವೂ ಕಡಿಮೆ. ಆ ಆಯುಷ್ಯದಲ್ಲಿಯೂ ರಾತ್ರಿ ನಿದ್ರೆಯಿಂದ ವ್ಯರ್ಥವಾಗಿ ಕಳೆದುಹೋಗುತ್ತದೆ. ಹಗಲು ಹಣ ಸಂಪಾದನೆಗೆ ಮೀಸಲಾಗುತ್ತದೆ.

**ಕಿಮನ್ಯೈರಸದಾಲಾಪೈರಾಯುಷೋ ಯದಸದ್‌ವ್ಯಯಃ ।**
**ಕ್ಷುದ್ರಾಯುಷಾಂ ನೃಣಾಮಂಗ ಮರ್ತ್ಯಾನಾಮೃತಮಿಚ್ಛತಾಮ್ ॥**

**ಭಾಗ-೧-೧೬-೭)**

ಬೇರೆ ಹಾಳು ಹರಟೆ ಬೇಡ. ಅದರಿಂದ ಆಯುಷ್ಯ ವ್ಯರ್ಥವಾಗಿ ಕಳೆಯುವುದು. ನರಕಸಾಧನೆಯಾಗುವುದು. ಜ್ಞಾನಸಾಧನೆಯನ್ನು

ಬಯಸುವ ಅಲ್ಪಾಯುಗಳಾದ ನಮಗೆ ಅಂಥ ಹಾಳು ಹರಟೆಯಿಂದೇನು? (ಆದ್ದರಿಂದ ಭಗವಂತನ ಭಗವದ್‌ಭಕ್ತರ ಕಥೆ ಹೇಳಿ ಎಂದು ಶೌನಕರು ಸೂತರಲ್ಲಿ ಕೇಳುವರು.)

**ತಾನ್‌ಶೋಚ್ಯಶೋಚ್ಯಾನವಿದೋಽನುಶೋಚೇ**
**ಹರೇಃ ಕಥಾಯಾಂ ವಿಮುಖಾನಘೇನ ।**
**ಕ್ಷಿಣೋತಿ ದೇವೋಽನಿಮಿಷಸ್ತು ತೇಷಾ-**
**ಮಾಯುರ್ವೃಥಾವಾದಗತಿಸ್ಮೃತೀನಾಮ್ ॥**

(ಭಾಗ-೩-೫-೧೪)

ಭಾರತ ಕಥೆಗಳ ಹಾರ್ದವನ್ನರಿಯದೆ ಪಾಪಕರವಾದ ಹಾಳು ವಿಷಯಗಳಲ್ಲೇ ಮುಳುಗಿ ಹರಿಕಥೆಗೆ ವಿಮುಖರಾದವರ ಅವಸ್ಥೆ ತೀರ ಶೋಚನೀಯ. ಅವರ ಕಾಯ ವಾಕ್ ಮನಸ್ಸುಗಳಿಂದಾಗುವ ಎಲ್ಲ ಕಾರ್ಯಗಳೂ ವ್ಯರ್ಥವಾಗುತ್ತವೆ. ಅವರ ಆಯುಷ್ಯವನ್ನು ಕಾಲನಾಮಕ ಹರಿ ವ್ಯರ್ಥವಾಗಿ ಕಳೆಯುತ್ತಾನೆ.

**ಸಂವತ್ಸರಶತಂ ನೃಣಾಂ ಪರಮಾಯುರ್ನಿರೂಪಿತಮ್ ॥**

(ಭಾಗ-೩-೧೨-೧೨)

ನೂರು ವರ್ಷಗಳು ಮನುಷ್ಯರಿಗೆ ಪೂರ್ಣಾಯುಷ್ಯವೆನಿಸುವುದು.

**ಏತನ್ಮಹಾಪುಣ್ಯಮಲಂ ಪವಿತ್ರಂ**
**ಧನ್ಯಂ ಯಶಸ್ಯಂ ಪದಮಾಯುರಾಶಿಷಾಮ್ ।**
**ಪ್ರಾಣೇಂದ್ರಿಯಾಣಾಂ ಯುಧಿ ಶೌರ್ಯವರ್ಧನಂ**
**ನಾರಾಯಣೋಽಂತೇ ಗತಿರಂಗ ಶೃಣ್ವತಾಮ್ ॥**

(ಭಾಗ-೩-೨೦-೩೮)

ಈ ವರಾಹಚರಿತ್ರೆ ಕೇಳುವವನಿಗೆ ಮಹಾಪುಣ್ಯಪ್ರದ, ಮಹಾಪವಿತ್ರ, ಧನ್ಯತೆ ತಂದುಕೊಡುತ್ತದೆ, ಯಶಸ್ಸು ನೀಡುತ್ತದೆ, ಆಯುಸ್ಸು ಸಂಪತ್ತುಗಳಿಗೆ

ಕಾರಣವಾಗುತ್ತದೆ. ಯುದ್ಧದಲ್ಲಿ ಪ್ರಾಣ, ಇಂದ್ರಿಯಗಳಿಗೆ ಶೌರ್ಯ ವರ್ಧನೆ ಮಾಡುತ್ತದೆ. ಅಪರೋಕ್ಷದ ಮೂಲಕ ನಾರಾಯಣ ಪ್ರಾಪ್ತಿಗೆ ಕಾರಣವಾಗುತ್ತದೆ.

**ಏವಂ ವಿಧೈರಹೋರಾತ್ರೈಃ ಕಾಲಗತ್ಯುಪಲಕ್ಷಿತೈಃ ।**
**ಅಪೇಕ್ಷಿತಮಿವಾಸ್ಯಾದಿ ಪರಮಾಯುರ್ವಯಃ ಶತಮ್ ॥**

(ಭಾಗ-೩-೧೨-೩೨)

ಬ್ರಹ್ಮನಿಗೆ 1000 ಚತುರ್ಯುಗಗಳು ಒಂದು ಹಗಲು. ಅಷ್ಟೇ ರಾತ್ರಿಯೂ ಇರುತ್ತದೆ. ಕಾಲಗತಿಯಿಂದ ತಿಳಿದುಬರುವ ಇಂಥ ಹಗಲು ರಾತ್ರಿಗಳಿಂದಲೂ ನೂರು ವರ್ಷಗಳೇ ಬ್ರಹ್ಮನ ಪೂರ್ಣ ಆಯುಷ್ಯ. ಬ್ರಹ್ಮ ಪರಮ ವಿರಕ್ತ. ಹಾಗಿದ್ದರೂ ಅವನಿಗೆ ಪರಮಾತ್ಮನ ಸೇವಾऽವಕಾಶ ದೃಷ್ಟಿಯಿಂದ ಈ ಆಯುಷ್ಯ ಅಪೇಕ್ಷಿತವಾಗಿದೆ. ಈ ಆಯುಷ್ಯಕ್ಕೆ ಪರ ಎಂದು ಹೆಸರು.

**ಧನ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ಸ್ವಸ್ತ್ಯಯನಂ ಮಹತ್ ।**
**ಸ್ವರ್ಗ್ಯಂ ಧ್ರೌವ್ಯಂ ಸೌಮನಸ್ಯಂ ಪ್ರಶಸ್ಯಮಘಮರ್ಷಣಮ್ ॥**

(ಭಾಗ-೪-೧೨-೪೪)

ಧ್ರುವನ ಚರಿತ್ರೆಯ ಶ್ರವಣ ಧನಸಂಪತ್ತು, ಯಶಸ್ಸು, ಆಯುಸ್ಸು ಪುಣ್ಯಮಂಗಳಗಳನ್ನೂ ಸ್ವರ್ಗಮೋಕ್ಷಗಳನ್ನೂ ಒಳ್ಳೆಯ ಮನಸ್ಸನ್ನೂ ನೀಡುವುದು. ಪಾಪನಾಶಕವೂ ಆಗಿದೆ.

**ಅಸ್ಪಷ್ಟಕೀರ್ತಿಃ ಸುಯಶಾ ಮೂರ್ಖೋ ಭವತಿ ಪಂಡಿತಃ ।**
**ಇದಂ ಸ್ವಸ್ತ್ಯಯನಂ ಪುಂಸಾಮಮಂಗಲ್ಯ ನಿವಾರಣಮ್ ।**
**ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಕಲಿಮಲಾಪಹಮ್ ॥**

(ಭಾಗ-೪-೨೩-೩೪)

ಪೃಥು ಚರಿತ್ರೆ ಶ್ರವಣದಿಂದ ಸ್ವಷ್ಟಕೀರ್ತಿ ರಹಿತನು ಒಳ್ಳೆಯ ಕೀರ್ತಿ ಶಾಲಿಯಾಗುವನು. ಮೂರ್ಖನು ಪಂಡಿತನಾಗುವನು. ಎಲ್ಲ ಜನರಿಗೂ ಇದು ಇಷ್ಟಸಾಧಕ. ಅನಿಷ್ಟ ನಿವಾರಕ. ಧನ, ಯಶಸ್, ಆಯುಷ್ಯ ಮತ್ತು ಸ್ವರ್ಗಗಳನ್ನು ಕೊಡುವುದು. ಕಲಿಯ ದೋಷಗಳನ್ನು ತೊಡೆಯುವುದು.

**ಇದಂ ಭಾಗವತಸಭಾಜಿತಾವದಾತಗುಣಕರ್ಮಣೋ ರಾಜರ್ಷೇರ್ಭರತಸ್ಯಾನುಚರಿತಂ ಸ್ವಸ್ತ್ಯಯನಮಾಯುಷ್ಯಂ ಧನ್ಯಂ ಯಶಸ್ಯಂ ಸ್ವರ್ಗ್ಯಮಾಪವರ್ಗ್ಯಂ ಚಾನುಶೃಣೋತ್ಯಾಖ್ಯಾಸ್ಯತ್ಯಭಿನಂದತಿ ಚ ಸರ್ವಾ ಹ್ಯೇವಾಶಿಷ ಆತ್ಮನ ಆಶಾಸ್ತೇ ನ ಕಾಞ್ಚನ ಪರತ ಇತಿ ಚ ॥ (ಭಾಗ-5-13-30)**

ಇದು ಭಗವದ್‌ಭಕ್ತರು ಆದರಿಸುವ ನಿರ್ಮಲಗುಣ ಕರ್ಮಗಳುಳ್ಳ ರಾಜರ್ಷಿಭರತನ ಚರಿತ್ರೆ. ಮಂಗಳಕರ. ಆಯುಷ್ಯ, ಧನಸಂಪತ್ತು ಕೀರ್ತಿ, ಸ್ವರ್ಗಮೋಕ್ಷಗಳನ್ನು ನೀಡುವಂಥದ್ದು. ಇದನ್ನು ಕೇಳುವ ಹೇಳುವ ಅನುಭವಿಸುವ ಮಾನವನು ಎಲ್ಲ ಅಭೀಷ್ಟಗಳನ್ನೂ ಭಗವಂತನಿಂದಲೇ ಹೊಂದಲು ಬಯಸುತ್ತಾನೆ. ಯಾವ ಅಭೀಷ್ಟವನ್ನೂ ಇನ್ನೊಬ್ಬ ದೇವತೆಯಿಂದಾಗಲಿ ಮನುಷ್ಯನಿಂದಾಗಲಿ ಪಡೆಯಲು ಬಯಸುವುದಿಲ್ಲ.

**ತತ್‌ಪ್ರಯಾಸೋ ನ ಕರ್ತವ್ಯೋ ಯತ ಆಯುರ್ವ್ಯಯಃ ಪರಮ್ ।**
**ನ ತಥಾ ವಿಂದತೇ ಕ್ಷೇಮಂ ಮುಕುಂದಚರಣಾಂಬುಜಮ್ ॥**

**(ಭಾಗ-೭-೬-೯)**

**ತತೋ ಯತೇತ ಕುಶಲಃ ಕ್ಷೇಮಾಯ ಚ ತಮಾಶ್ರಿತಃ ।**
**ಶರೀರಂ ಪೌರುಷಂ ಯಾವನ್ನ ವಿಪದ್ಯೇತ ಪುಷ್ಕಲಮ್ ॥**

**(ಭಾಗ-೭-೬-೧೦)**

ಅನಾದಿ ಸಂಸಾರದಲ್ಲಿ ಜೀವನು ವಿಷಯ ಸುಖದುಃಖಗಳನ್ನು ನೀಡುವಂಥ ಪುಣ್ಯಪಾಪಕರ್ಮಗಳನ್ನು ಮಾಡಿರುತ್ತಾನೆ. ಹೀಗಾಗಿ ಈಗ ಅವುಗಳಿಗಾಗಿ ಬೇರೆ ಪ್ರಯತ್ನಮಾಡದಿದ್ದರೂ ಅವು ಲಭಿಸುತ್ತವೆ.

ಅದರಿಂದ ಅವುಗಳಿಗಾಗಿ ಪ್ರಯತ್ನ ಮಾಡಬಾರದು. ಮಾಡಿದರೆ ಅದರಲ್ಲಿಯೇ ಉತ್ತಮವಾದ ಆಯುಷ್ಯ ವ್ಯಯವಾಗಿ ಹೋಗುತ್ತದೆ. ಆದರೆ ಕ್ಷೇಮಕರವಾದ ಮುಕುಂದಚರಣಾಂಬುಜಸೇವೆಯನ್ನು ಪ್ರಯತ್ನ ಮಾಡದೆ ಹೊಂದಲಾಗುವುದಿಲ್ಲ. ಏಕೆಂದರೆ ಅದಕ್ಕೆ ಪೂರ್ವಜನ್ಮಗಳಲ್ಲಿ ಪುಣ್ಯ ಮಾಡಿರುವುದಿಲ್ಲ.

ಶರೀರವು ಸಕಲೇಂದ್ರಿಯಯುಕ್ತವಾಗಿ ಬಲಿಷ್ಠವಾಗಿದ್ದು ಎಲ್ಲಿಯ ವರೆಗೆ ಹಾಳಾಗದೇ ಹಾಗೇ ಇರುವುದೋ ಅಷ್ಟರೊಳಗೇ ಬುದ್ಧಿವಂತನು ವಿಷ್ಣುವನ್ನು ಆಶ್ರಯಿಸಿ ಮೋಕ್ಷಸಾಧನ ಮಾಡಬೇಕು.

**ಪುಂಸೋ ವರ್ಷಶತಂ ಹ್ಯಾಯುಸ್ತದರ್ಧಮಜಿತಾತ್ಮನಃ ।**
**ನಿಷ್ಫಲಂ ಯದಸೌ ರಾತ್ರ್ಯಾಂ ಶೇತೇಽಂಧಂ ಪ್ರಾಪಿತಸ್ತಮಃ ॥**

ಮಾನವನಿಗೆ ಪರಮಾವಧಿ ನೂರು ವರ್ಷ ಆಯುಷ್ಯವಿರುತ್ತದೆ. ಅದರಲ್ಲಿ ಅರ್ಧಭಾಗ ನಿದ್ರೆ ಮುಂತಾದುವನ್ನು ನಿಗ್ರಹ ಮಾಡದಿರುವವನಿಗೆ ವ್ಯರ್ಥವಾಗಿ ಕಳೆಯುತ್ತದೆ. ಏಕೆಂದರೆ ರಾತ್ರಿಯಲ್ಲಿ ಆತ ಎಲ್ಲವನ್ನೂ ಮರೆಸುವ ಅಜ್ಞಾನದಿಂದ ಆವೃತನಾಗಿ ಮಲಗಿರುತ್ತಾನೆ.

**ಮುಗ್ಧಸ್ಯ ಬಾಲ್ಯಕೌಮಾರ್ಯೈಃ ಕ್ರೀಡತೋ ಯಾತಿ ವಿಂಶತಿಃ ।**
**ಜರಯಾ ಗ್ರಸ್ತದೇಹಸ್ಯ ಯಾತ್ಯಕಲ್ಪಸ್ಯ ವಿಂಶತಿಃ ॥**

ಬಾಲ್ಯ ಕೌಮಾರ ವಯಸ್ಸಿನ ದೇಹವಿರುವಾಗ ಆತ ಮುಗ್ಧನಾಗಿ ಆಟವಾಡುತ್ತಿರುವಂತೆಯೇ ಇಪ್ಪತ್ತು ವರ್ಷಕಾಲ ವ್ಯರ್ಥವಾಗಿ ಕಳೆಯುತ್ತದೆ. ಮುಪ್ಪಿನಿಂದ ಹಣ್ಣಾದ ಶರೀರದವನಾದಾಗ ಅಶಕ್ತನಾಗುವುದರಿಂದ ಪುನಃ ಇಪ್ಪತ್ತು ವರ್ಷಕಾಲ ವ್ಯರ್ಥವಾಗಿ ಕಳೆದುಹೋಗುತ್ತದೆ.

**ದುರಾಪೂರೇಣ ಕಾಮೇನ ಮೋಹೇನ ಚ ಬಲೀಯಸಾ ।**
**ಶೇಷಂ ಗೃಹೇಷು ಸಕ್ತಸ್ಯ ಪ್ರಮತ್ತಸ್ಯಾಪಯಾತಿ ಹಿ ॥**

ಇನ್ನು ಉಳಿದ ಆಯುಷ್ಯವೆಲ್ಲವೂ ಪೂರೈಸಲಾಗದ ಭೋಗಲಾಲಸೆ

ಯಿಂದಲೂ ಬಲಿಷ್ಠವಾದ ಮೋಹದಿಂದಲೂ ಗೃಹಸ್ಥ ಜೀವನದಲ್ಲಿ ಆಸಕ್ತನಾಗಿದ್ದು ಆತ ಮೋಕ್ಷಸಾಧನೆಯನ್ನೇ ಮರೆತಿರುವಾಗ ವ್ಯರ್ಥವಾಗಿ ಕಳೆದು ಹೋಗುತ್ತದೆ. (ಭಾಗ-7-6-11-13)

**ಕುಟುಂಬ ಪೋಷಾಯ ಚ ಯನ್ನಿಜಾಯು-**
**ರ್ನ ಬುದ್ಧ್ಯತೇಽರ್ಥಂ ವಿಹತಂ ಪ್ರಮತ್ತಃ ।**
**ಸರ್ವತ್ರ ತಾಪತ್ರಯದುಃಖಿತಾತ್ಮಾ**
**ನಿರ್ವಿದ್ಯತೇ ನ ಸ್ವಕುಟುಂಬರಾಮಃ ॥** (ಭಾಗ-೭-೬-೨೦)

ತನ್ನ ಆಯುಷ್ಯ ಕುಟುಂಬ ಪೋಷಣೆಗೆ ವ್ಯಯವಾಗುವುದನ್ನು ತಿಳಿಯುವುದಿಲ್ಲ. ಶಾಸ್ತ್ರವಿಹಿತವಾದ ಪ್ರಮೇಯಗಳನ್ನು ಅರಿಯುವುದಿಲ್ಲ. ಎಲ್ಲವನ್ನೂ ಮರೆಯುತ್ತಾನೆ. ಎಲ್ಲ ಕಡೆ ತಾಪತ್ರಯಗಳಿಂದ ಮನಸ್ಸು ನೋಯುತ್ತಿದ್ದರೂ ತನ್ನ ಕುಟುಂಬದೊಡನೆ ಕ್ರೀಡಿಸುತ್ತಾನೆ ಹೊರತು ವೈರಾಗ್ಯ ಹೊಂದುವುದಿಲ್ಲ.

**ಇತಿ ತಸ್ಮೈ ವರಂ ದತ್ತ್ವಾ ಶ್ರಿಯಂ ಚಾನ್ವಯವರ್ಧಿನೀಮ್ ।**
**ಬಲಮಾಯುರ್ಯಶಃ ಕಾಂತಿಂ ನಿರ್ಜಗಾಮ ಸಹಾಗ್ರಜಃ ॥**

(ಭಾಗ-೧೦-೪೧-೫೧)

(ಶ್ರೀಕೃಷ್ಣ ಬಲರಾಮನೊಂದಿಗೆ ಕಂಸ ಸಂಹಾರಕ್ಕೆಂದು ಮಥುರಾಪುರ ಪ್ರವೇಶ ಮಾಡಿದಾಗ ಸುದಾಮನೆಂಬ ಹೂವಾಡಿಗನ ಮನೆಗೆ ಬಂದು ಅವನು ಅರ್ಪಿಸಿದ ಹೂಮಾಲೆಗಳನ್ನು ಧಾರಣೆ ಮಾಡಿದ. ಅವನು ಕೇಳಿದ ವಿಷ್ಣು ಭಕ್ತಿ, ವಿಷ್ಣುಭಕ್ತರಲ್ಲಿ ಸೌಹಾರ್ದ, ಎಲ್ಲ ಪ್ರಾಣಿಗಳಲ್ಲಿ ದಯೆ ಎಂಬ ವರವನ್ನು ಕೊಟ್ಟು) ವಂಶಪೂರ್ತಿ ಅಭಿವೃದ್ಧಿಯಾಗುವ ಸಂಪತ್ತನ್ನು ಬಲ, ಆಯುಷ್ಯ, ಯಶಸ್, ಕಾಂತಿಗಳನ್ನು ದಯಪಾಲಿಸಿ ಅಲ್ಲಿಂದ ಹೊರಟನು.

# ದೈನಂದಿನ ಆಚರಣೆಗಳಲ್ಲಿ...

ದಂತಧಾವನ (ಹಲ್ಲುಜ್ಜುವಾಗ) ಕಾಲದಲ್ಲಿ ಬಳಸುವ ದಂತ ಕಾಷ್ಠದ ದೇವತೆಯಲ್ಲಿ ಆಯುಷ್ಯ ಪ್ರಾರ್ಥನೆ-

**ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶುವಸೂನಿ ಚ ।**
**ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ॥**

ಹೇ ವನಸ್ಪತಿ ದೇವತೆಯೇ! ಆಯುಷ್ಯ ಬಲ ಯಶಸ್ ವರ್ಚಸ್ ಸಂತತಿ ಪಶು ಸಂಪತ್ತು ಬ್ರಹ್ಮಪ್ರಜ್ಞೆ ಮೇಧಾಶಕ್ತಿಗಳನ್ನು ನನಗೆ ನೀಡು.

**ದೇವಸ್ಯ ಪೂರ್ವದಿಗ್ಭಾಗೇ ಜಪೇದಾಯುಷ್ಯವರ್ಧನಮ್ ।**

ದೇವರಿಗೆ ಪೂರ್ವದಿಕ್ಕಿನಲ್ಲಿ ಜಪಮಾಡುವುದರಿಂದ ಆಯುಷ್ಯ ವೃದ್ಧಿಯಾಗುವುದು.

ತುಲಸೀದಲಗಳನ್ನು ದೇವರ ಪೂಜೆಗಾಗಿ ಬಿಡಿಸುವಾಗ ಆಯುಷ್ಯ ಪ್ರಾರ್ಥನೆ-

**ಶ್ರಿಯಂ ದೇಹಿ ಯಶೋ ದೇಹಿ ಕೀರ್ತಿಮಾಯುಸ್ತಥಾ ಸುಖಮ್ ।**
**ಬಲಂ ಪುಷ್ಟಿಂ ತಥಾ ಧರ್ಮಂ ತುಲಸಿ ತ್ವಂ ಪ್ರಯಚ್ಛ ಮೇ ॥**

ಹೋಮದ ಕೊನೆಯಲ್ಲಿ ಅಗ್ನಿಯಲ್ಲಿ ಆಯುಷ್ಯ ಪ್ರಾರ್ಥನೆ-

**ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಮ್ ।**
**ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೇ ಹವ್ಯವಾಹನ ॥**
**ದೇಹಿ ಮೇ ಹವ್ಯವಾಹನೋಂ ನಮೋ ನಮಃ ॥**

# ಆಯುರ್ವೃದ್ಧಿಕರವಾದ ವರ್ಧಾಪನವಿಧಿ

॥ ಶ್ರೀ ಗುರುಭ್ಯೋ ನಮಃ ॥

॥ ಪರಮ ಗುರುಭ್ಯೋ ನಮಃ ॥

॥ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋ ನಮಃ ॥

**ದೇವತಾ ನಮಸ್ಕಾರ-**

**ನಾರಾಯಣಾಯ ಪರಿಪೂರ್ಣಗುಣಾರ್ಣವಾಯ**
**ವಿಶ್ವೋದಯಸ್ಥಿತಿಲಯೋನ್ನಿಯತಿ ಪ್ರದಾಯ ।**
**ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ**
**ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥**
**ಯೋ ವಿಪ್ರಲಂಭ ವಿಪರೀತಮತಿಪ್ರಭೂತ**
**ವಾದಾನ್ನಿರಸ್ಯ ಕೃತವಾನ್ ಭುವಿ ತತ್ವವಾದಮ್ ।**
**ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತಮ್**
**ಆನಂದತೀರ್ಥಮುನಿವರ್ಯಮಹಂ ನಮಾಮಿ ॥**

ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ। ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರದೇವಮ್। ದೇವೀಂ ವಂದೇ ಸುಪರ್ಣೀಮಹಿಪತಿದಯಿತಾಂ ವಾರುಣೀಮಪ್ಯುಮಾಂ ತಾಮ್ । ಇಂದ್ರಾದೀನ್ ಕಾಮಮುಖ್ಯಾನಪಿ ಸಕಲಸುರಾಂಸ್ತದ್ಗುರೂನ್ ಮದ್ಗುರೂಂಶ್ಚ॥

ದೇವರ ದೀಪ ಹಚ್ಚಿಡಬೇಕು. ಆಚಮನ ಪ್ರಾಣಾಯಾಮಗಳನ್ನು ಮಾಡಿ ಸಂಕಲ್ಪ ಮಾಡಬೇಕು.

**ಸಂಕಲ್ಪ**

ಶುಭೇ ಶೋಭನೇ ಮುಹೂರ್ತೇ......ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಪ್ರೇರಣಯಾ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಆಯುರಭಿವೃದ್ಧಿದ್ವಾರಾ ಚಿರಕಾಲಭಗವತ್ಸೇವಾಭಾಗ್ಯ ಸಿದ್ಧ್ಯರ್ಥಂ ವರ್ಷವೃದ್ಧಿಕರ್ಮ ಕರಿಷ್ಯೇ।

(ರಂಗವಲ್ಲಿ ಹಾಕಿದ ಮಂಡಲದ ಮೇಲೆ ಒಂದು ತಟ್ಟೆಯಲ್ಲಿ ಅಕ್ಕಿ ಹಾಕಿ ಅದರ ಮೇಲೆ ಅಕ್ಷತೆರಾಶಿಗಳನ್ನಿಟ್ಟು ಅದರಲ್ಲಿ ಕೆಳಗಿನ ದೇವತೆಗಳನ್ನು ನಾಮಮಂತ್ರದಿಂದ ಆವಾಹನೆ ಮಾಡಬೇಕು.)

1. ಕುಲದೇವತಾಯೈನಮಃ ಆತ್ಮನಃ ಕುಲದೇವತಾಂ (ಲಕ್ಷ್ಮೀನರಸಿಂಹಂ/ ಲಕ್ಷ್ಮೀವೆಂಕಟೇಶಂ....) ಆವಾಹಯಾಮಿ।
2. ಜನ್ಮನಕ್ಷತ್ರದೇವತಾಯೈ ನಮಃ ಜನ್ಮನಕ್ಷತ್ರದೇವತಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀ ಲಕ್ಷ್ಮೀನೃಸಿಂಹಮ್ ಆವಾಹಯಾಮಿ।
3. ಪಿತೃಭ್ಯೋ ನಮಃ । ಪಿತೃದೇವತಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀ ಜನಾರ್ದನಂ ಆವಾಹಯಾಮಿ।
4. ಪ್ರಜಾಪತಯೇ ನಮಃ । ಪ್ರಜಾಪತ್ಯಂತರ್ಗತ ಶ್ರೀಲಕ್ಷ್ಮೀನಾರಾಯಣಮ್ ಆವಾಹಯಾಮಿ।
5. ಭಾನವೇ ನಮಃ । ಭಾನು-ಅಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಂ ಆವಾಹಯಾಮಿ॥
6. ವಿಘ್ನೇಶಾಯ ನಮಃ । ವಿಘ್ನೇಶಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವಿಶ್ವಂಭರಮ್ ಆವಾಹಯಾಮಿ।
7. ಮಾರ್ಕಂಡೇಯಾಯ ನಮಃ । ಮಾರ್ಕಂಡೇಯ ಋಷ್ಯಂತರ್ಗತ

ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀವೇದವ್ಯಾಸಮ್ ಆವಾಹಯಾಮಿ।

8. ಶ್ರೀವೇದವ್ಯಾಸಾಯ ನಮಃ। ಶ್ರೀವೇದವ್ಯಾಸಮ್ ಆವಾಹಯಾಮಿ।

9. ಶ್ರೀ ಪರಶುರಾಮಾಯ ನಮಃ। ಶ್ರೀ ಹರಿಣೀಪತಿ ಪರಶುರಾಮಮ್ ಆವಾಹಯಾಮಿ।

10. ಶ್ರೀ ಹನೂಮತೇ ನಮಃ । ಶ್ರೀ ಹನುಮದಂತರ್ಗತ ಶ್ರೀರಾಮಚಂದ್ರಮ್ ಆವಾಹಯಾಮಿ।

11. ಅಶ್ವತ್ಥಾಮ್ನೇ ನಮಃ । ಶ್ರೀ ಅಶ್ವತ್ಥಾಮಾಚಾರ್ಯಾಂತರ್ಗತ ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನರಸಿಂಹಮ್ ಆವಾಹಯಾಮಿ।

12. ಕೃಪಾಯ ನಮಃ । ಕೃಪಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಕೃಷ್ಣಮ್ ಆವಾಹಯಾಮಿ।

13. ವಿಭೀಷಣಾಯ ನಮಃ । ವಿಭೀಷಣಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸೀತಾಪತಿ ಶ್ರೀರಾಮಚಂದ್ರಂ ಆವಾಹಯಾಮಿ।

14. ಬಲಿನೇ ನಮಃ । ಬಲಿ ಅಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀತ್ರಿವಿಕ್ರಮಮ್ ಆವಾಹಯಾಮಿ।

15. ಪ್ರಹ್ಲಾದಾಯ ನಮಃ । ಪ್ರಹ್ಲಾದಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನರಸಿಂಹಮ್ ಆವಾಹಯಾಮಿ।

16. ಷಷ್ಠ್ಯೈ ನಮಃ। ಷಷ್ಠೀದೇವತಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನರಸಿಂಹಮ್ ಆವಾಹಯಾಮಿ।
ಆವಾಹನ ಮಂತ್ರ

**ಆಯಾಹಿ ವರದೇ ದೇವಿ ಮಹಾಷಷ್ಠೀತಿ ವಿಶ್ರುತೇ।**
**ಶಕ್ತಿಭಿಃ ಸಹ ಬಾಲಂ ಮೇ ರಕ್ಷ ಜಾಗರವಾಸರೇ ॥**

ಭೋಃ ಸ್ವಾಮಿನ್ ಜಗತಾಂ ನಾಥ ಯಾವತ್ಪೂಜಾವಸಾನಕಮ್ ।
ತಾವತ್ಸಂಪ್ರೀತಿ ಭಾವೇನ ಬಿಂಬೇ ಸನ್ನಿಹಿತೋ ಭವ ॥

ಹೀಗೆ ಆವಾಹಿಸಿ ಧ್ಯಾನಾದಿ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಷಷ್ಠೀದೇವತೆಗೆ ಮೊಸರನ್ನದ ನೈವೇದ್ಯವನ್ನು ಉಳಿದವರಿಗೆ ಹಾಲು ಬೆಲ್ಲ ಅನ್ನದ ಪಾಯಸವನ್ನು ನೈವೇದ್ಯ ಮಾಡಬೇಕು.

ಪೂಜೆಯ ಅನಂತರದಲ್ಲಿ ಹೀಗೆ ಪ್ರಾರ್ಥನೆ ಮಾಡಬೇಕು-

ಚಿರಂಜೀವಿ ಯಥಾ ತ್ವಂ ಭೋ ಭವಿಷ್ಯಾಮಿ ತಥಾ ಮುನೇ ।
ರೂಪವಾನ್ ವಿತ್ತವಾಂಶ್ಚೈವ ಕ್ರಿಯಾಯುಕ್ತಶ್ಚ ಸರ್ವದಾ ॥

ಮಾರ್ಕಂಡೇಯ ನಮಸ್ತೇಽಸ್ತು ಸಪ್ತಕಲ್ಪಾಂತಜೀವನ ।
ಆಯುರಾರೋಗ್ಯಸಿದ್ಧ್ಯರ್ಥಂ ಪ್ರಸೀದ ಭಗವನ್ಮುನೇ ॥

ಚಿರಂಜೀವೀ ಯಥಾ ತ್ವಂ ತು ಮುನೀನಾಂ ಪ್ರವರೋ ದ್ವಿಜ ।
ಕುರುಷ್ವ ಮುನಿಶಾರ್ದೂಲ ತಥಾ ಮಾಂ ಚಿರಂಜೀವಿನಮ್ ॥

ಮಾರ್ಕಂಡೇಯ ಮಹಾಭಾಗ ಸಪ್ತಕಲ್ಪಾಂತಜೀವನ ।
ಆಯುರಾರೋಗ್ಯಸಿದ್ಧ್ಯರ್ಥಂ ಅಸ್ಮಾಕಂ ವರದೋಭವ ॥

ಷಷ್ಠೀದೇವಿಯ ಪ್ರಾರ್ಥನೆ-

ಜಯದೇವಿ ಜಗನ್ಮಾತ ರ್ಜಗದಾನಂದ ಕಾರಿಣಿ
ಪ್ರಸೀದ ಮಮ ಕಲ್ಯಾಣಿ ನಮಸ್ತೇ ಷಷ್ಠಿದೇವತೇ ॥೧॥

ತ್ರೈಲೋಕ್ಯೇ ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ।
ಬ್ರಹ್ಮವಿಷ್ಣುಶಿವೈಃ ಸಾರ್ಧಂ ರಕ್ಷಾಂ ಕುರ್ವಂತು ತಾನಿ ಮೇ ॥೨॥

ಶಕ್ತಿಸ್ತ್ವಂ ಸರ್ವದೇವಾನಾಂ ಲೋಕಾನಾಂ ಹಿತಕಾರಿಣೀ ।
ಮಾತರ್ಬಾಲಮಿಮಂ ರಕ್ಷ ಮಹಾಷಷ್ಠಿ ನಮೋಽಸ್ತು ತೇ ॥೩॥

ಗೌರೀಪುತ್ರೋ ಯಥಾ ಸ್ಕಂದಃ ಶಿಶುತ್ವೇ ರಕ್ಷಿತಃ ಪುರಾ ।
ತಥಾ ಮಮಾಪ್ಯಯಂ ಬಾಲಃ ಷಷ್ಠಿಕೇ ರಕ್ಷ ತೇ ನಮಃ ॥೪॥

ಜನನೀ ಸರ್ವಭೂತಾನಾಂ ಬಾಲಾನಾಂ ಚ ವಿಶೇಷತಃ ।
ನಾರಾಯಣೀಸ್ವರೂಪೇಣ ಬಾಲಂ ಮೇ ರಕ್ಷ ಸರ್ವದಾ ॥೫॥

ಭೂತಪ್ರೇತ ಪಿಶಾಚೇಭ್ಯಃ ಡಾಕಿನೀ ಯೋಗಿನೀಷು ಚ ।
ಮಾತೇವ ರಕ್ಷ ಬಾಲಂ ಮೇ ಶ್ವಾಪದೇ ಪನ್ನಗೇಷು ಚ ॥೬॥

ಬಳಿಕ ಅಂಗೈಯಲ್ಲಿ ಹಾಲು-ಸ್ವಲ್ಪ ಎಳ್ಳು-ಬೆಲ್ಲಗಳನ್ನು ಸೇರಿಸಿ ಹಾಕಿಕೊಂಡು ಕೆಳಗಿನ ಮಂತ್ರವನ್ನು ಹೇಳಿಕೊಂಡು ಕುಡಿಯಬೇಕು.

ಸತಿಲಂ ಗುಡಸಂಮಿಶ್ರಮಂಜಲ್ಯರ್ಧಮಿತಂ ಪಯಃ ।
ಮಾರ್ಕಂಡೇಯಾದ್ವರಂ ಲಬ್ಧ್ವಾ ಪಿಬಾಮ್ಯಾಯುರ್ವಿವೃದ್ಧಯೇ ॥

ಆವಾಹಿತ ದೇವತೆಗಳಿಗೆ ನಮಸ್ಕಾರವನ್ನು ಮಾಡಬೇಕು.

ಯಸ್ಯ ಸ್ಮೃತ್ಯಾ ಚ ......ಅನೇನ ಆಯುರ್ವೃದ್ಧ್ಯರ್ಥಂ ಕೃತೇನ ವರ್ಷವೃದ್ಧಿಕರ್ಮಣಾ ಮಾರ್ಕಂಡೇಯ ಸಹಿತ ಚಿರಂಜೀವಿ ಷಷ್ಠೀದೇವತಾಂತರ್ಗತ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್ ॥ ಆಚಮನ ॥ ಅಚ್ಯುತಾಯ ನಮಃ। ಅನಂತಾಯನಮಃ। ಗೋವಿಂದಾಯ ನಮಃ। ಕಾಯೇನ ವಾಚಾ...॥

ಯಾಂತು ದೇವಗಣಾಃ ಸರ್ವೇ ಪೂಜಾಮಾದಾಯ ಮತ್ಕೃತಾಮ್ ।
ಇಷ್ಟಕಾಮ್ಯಾರ್ಥಸಿದ್ಧ್ಯರ್ಥಂ ಪುನರಾಗಮನಾಯ ಚ ॥

ಎಂದು ಮಂತ್ರಾಕ್ಷತೆ ಹಾಕಿ ಆವಾಹಿತದೇವತಾ ವಿಸರ್ಜನ ಮಾಡಬೇಕು.



ಹುಟ್ಟಿದ ಮಗುವಿಗೆ ಮೊದಲವರ್ಷ ಪ್ರತಿತಿಂಗಳ ಜನ್ಮತಿಥಿಯಲ್ಲಿ ವರ್ಧಾಪನ ಕಾರ್ಯವನ್ನು ಮಾಡಬೇಕು. ಆಮೇಲೆ ಪ್ರತಿ ವರ್ಷಕ್ಕೊಮ್ಮೆ ಜನ್ಮತಿಥಿಯಂದು ಮಾಡಬೇಕು. ಎರಡು ದಿನ ತಿಥಿ ಇದ್ದರೆ ಎಂದು ಜನ್ಮನಕ್ಷತ್ರದ ಯೋಗವಿರುವುದೋ ಅಂದು ಮಾಡಬೇಕು. ಎರಡೂ ದಿನ ಜನ್ಮನಕ್ಷತ್ರ ಯೋಗವಿರಲಿ ಇಲ್ಲದಿರಲಿ ಸೂರ್ಯೋದಯದಿಂದ ಎರಡು ಮುಹೂರ್ತ ಅಧಿಕವಾಗಿದ್ದ ದಿವಸ ಮಾಡಬೇಕು. ಅದಕ್ಕಿಂತ ಕಡಿಮೆಯಿದ್ದರೆ ಪೂರ್ವದಿನದಲ್ಲಿಯೇ ಮಾಡಬೇಕು. ಜನ್ಮಮಾಸವು ಅಧಿಕಮಾಸವಾಗಿ ಬಂದರೆ ವರ್ಧಾಪನವನ್ನು (ಹುಟ್ಟಿದ ಹಬ್ಬದ ಆಚರಣೆ) ಶುದ್ಧಮಾಸದಲ್ಲಿಯೇ ಮಾಡಬೇಕು.

ವರ್ಧಾಪನದ ದಿವಸ ಬ್ರಾಹ್ಮಣ ಭೋಜನ ಮಾಡಿಸಿ ಆಶೀರ್ವಾದ ಪಡೆಯಬೇಕು. ಹೊಸಬಟ್ಟೆ ಉಡಬೇಕು. ಹುಟ್ಟಿದ ಹಬ್ಬದ ದಿನ ಉಗುರು ಕೇಶಗಳನ್ನು ಕತ್ತರಿಸಬಾರದು. ಅಂದು ಮೈಥುನ ಮಾಡಬಾರದು. ದೂರದ ಪ್ರಯಾಣ ಮಾಡಬಾರದು. ಯಾವುದೇ ಕಲಹ ಹಿಂಸಾಕಾರ್ಯಗಳನ್ನು ಮಾಂಸಭಕ್ಷಣಾದಿಗಳನ್ನು ಮಾಡಬಾರದು. ಅಂದು ಎಳ್ಳಿನ ಪುಡಿಯನ್ನು ಮೈಗೆ ಹಚ್ಚಿಕೊಂಡು ತಣ್ಣೀರು ಸ್ನಾನ ಮಾಡಬೇಕು. ಹುಟ್ಟಿದ ಹಬ್ಬದಂದು ಬಿಸಿನೀರಿನ ಸ್ನಾನ ಮಾಡಬಾರದು.

# ನರಸಿಂಹಪುರಾಣದಲ್ಲಿ ಮಾರ್ಕಂಡೇಯರ ಮಂಗಲ ಚರಿತ್ರೆ

ನರಸಿಂಹಪುರಾಣದಲ್ಲಿ ವ್ಯಾಸರು ಶುಕರಿಗೆ ಮಾರ್ಕಂಡೇಯರ ಮಂಗಳಚರಿತ್ರೆಯನ್ನು ನಿರೂಪಿಸುವರು.

ಭೃಗು ಋಷಿಗಳಿಗೆ ಖ್ಯಾತಿ ಎಂಬ ಪತ್ನಿಯಲ್ಲಿ ಮೃಕಂಡು ಎಂಬ ಪುತ್ರ ಹುಟ್ಟಿದರು. ಮೃಕಂಡುವಿಗೆ ಸುಮಿತ್ರಾ ಎಂಬ ಪತ್ನಿಯಲ್ಲಿ ಹುಟ್ಟಿದ ಮಗುವೆ ಮಾರ್ಕಂಡೇಯ ಮುನಿಗಳು. ಆ ಮಗುವು ಜನಿಸಿದಾಗ ಬಂದ ಜ್ಯೋತಿಷಿ ಈ ಮಗುವಿಗೆ 12ನೇ ವರ್ಷ ತುಂಬುವಾಗ ಮೃತ್ಯು ಒದಗುವುದು ಎಂದು ಹೇಳಿದರು. ಅದರಿಂದ ಖಿನ್ನರಾದ ತಂದೆ ತಾಯಿಗಳು ಮಗುವಿಗೆ ಸಕಾಲಕ್ಕೆ ಉಪನಯನ ಮಾಡಿ ಗುರುಕುಲಕ್ಕೆ ಸೇರಿಸಿದರು. ಗುರುಶುಶ್ರೂಷೆ ಮಾಡಿಕೊಂಡು ವೇದಾಭ್ಯಾಸ ಮುಗಿಸಿ ಬ್ರಹ್ಮವರ್ಚಸ್ವಿಯಾಗಿ ಮಗು ಮಾರ್ಕಂಡೇಯರು ಮನೆಗೆ ಬಂದು ಅಪ್ಪ-ಅಮ್ಮನಿಗೆ ನಮಸ್ಕಾರ ಮಾಡಿದರು.

ಮಾರ್ಕಂಡೇಯರ ತೇಜಸ್ಸು ನೋಡಿ ಸಂತೋಷಗೊಂಡ ತಂದೆತಾಯಿಗಳು ಅವರಿಗೆ ಒದಗುವ ಮೃತ್ಯುವಿನ ನೆನಪಾಗಿ ಸಂಕಟದಿಂದ ಕಣ್ಣೀರು ಸುರಿಸಿದರು. ಅವರ ಶೋಕದ ಕಾರಣವನ್ನು ಕೇಳಿ ತಿಳಿದ ಮಾರ್ಕಂಡೇಯರು ದುಃಖಬೇಡ. ನಾನು ತಪಸ್ಸು ಮಾಡಿ ಅಪಮೃತ್ಯುವನ್ನು ಪರಿಹರಿಸಿಕೊಂಡು ದೀರ್ಘಾಯುವಾಗಿ ಬರುತ್ತೇನೆಂದರು.

ತಂದೆತಾಯಿಗಳಿಗೆ ನಮಸ್ಕಾರ ಮಾಡಿ ಕಾಡಿಗೆ ಬಂದ ಮಾರ್ಕಂಡೇಯರನ್ನು ಅಲ್ಲಿ ತಪೋನಿರತರಾಗಿದ್ದ ಭೃಗು ಬಂದ ಕಾರಣವನ್ನು ವಿಚಾರಿಸಿದರು.

ಮೃತ್ಯುವನ್ನು ಗೆಲ್ಲುವ ಬಗೆ ಹೇಳಿ. ನಿಮ್ಮಲ್ಲಿ ಶರಣಾಗಿದ್ದೇನೆಂದರು. ತಪಸ್ಸು ಮಾಡಿ ನಾರಾಯಣನನ್ನು ಒಲಿಸಿಕೊಳ್ಳುವುದೇ ಮೃತ್ಯು ಪರಿಹಾರದ ಮಾರ್ಗ ಎಂದರು ಭೃಗುಗಳು. ಮೃತ್ಯು ಪರಿಹಾರಕ ನರಸಿಂಹನ ಆರಾಧನೆಯ ಬಗೆ ಹೇಗೆ? ಎಂದು ಕೇಳಿದ ಮೊಮ್ಮಗನಿಗೆ ಭೃಗುಗಳು ಅದರ ವಿಧಿ ವಿಧಾನಗಳನ್ನು ತಿಳಿಹೇಳಿದರು - ತುಂಗಭದ್ರಾ ನದಿಯ ತೀರದ ಭದ್ರವಟ ಎಂಬ ವೃಕ್ಷದ ಕೆಳಗೆ ಭಗವಂತನನ್ನು ಪ್ರತಿಷ್ಠಾಪಿಸಿ ಗಂಧಪುಷ್ಪಾದಿಗಳಿಂದ ಪೂಜೆ ಮಾಡು. ಜಿತೇಂದ್ರಿಯನಾಗಿ ಹೃದಯ ಕಮಲದಲ್ಲಿ ಶಂಖಚಕ್ರಗದಾಧರನನ್ನು ನೆನೆಯುತ್ತ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಜಪಿಸು. ಅದರಿಂದ ಮೃತ್ಯುವನ್ನು ಗೆಲ್ಲುವಿ ಎಂದರು.

ಮಾರ್ಕಂಡೇಯರು ಅದೇ ರೀತಿ ಸಹ್ಯಪರ್ವತದಲ್ಲಿ ಹುಟ್ಟಿ ಹರಿಯುವ ತುಂಗಭದ್ರಾನದಿಯ ತೀರದಲ್ಲಿ ವಿಷ್ಣುಪ್ರತಿಷ್ಠೆ ಮಾಡಿ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಜಪಿಸುತ್ತ ಕೂತರು.

ಆಗ ಪಾಶಹಸ್ತರಾದ ಯಮಕಿಂಕರರು ಮಾರ್ಕಂಡೇಯರನ್ನು ಒಯ್ಯಲು ಬಂದರು. ಆದರೆ ಅಷ್ಟರಲ್ಲಿ ಅವರ ರಕ್ಷಣೆಗೆ ವಿಷ್ಣುವಿನ ಆಜ್ಞೆಯಿಂದ ಬಂದಿದ್ದ ವಿಷ್ಣುದೂತರು ಅವರನ್ನು ಶೂಲಗಳಿಂದ ಹೊಡೆದು ಓಡಿಸಿದರು. ಯಮಕಿಂಕರರು ನಾವು ಹೋಗುತ್ತೇವೆ. ಆದರೆ ಇವರನ್ನು ಕೊಂಡೊಯ್ಯಲು ಮೃತ್ಯುದೇವನೇ ಬರುತ್ತಾನೆಂದರು.

ಜಗನ್ನಾಥನ ಧ್ಯಾನದೊಳಿರುವವನಿಗೆ ಯಮನೆಲ್ಲಿ ಮೃತ್ಯುವೆಲ್ಲಿ? ಎಂದರು ವಿಷ್ಣುದೂತರು.

ಮೃತ್ಯುವು ಬಂದರೂ ಮಾರ್ಕಂಡೇಯರ ಸುತ್ತ ಇರುವ ಆಯುಧಹಸ್ತರಾದ ವಿಷ್ಣುಕಿಂಕರರನ್ನು ನೋಡಿಯೇ ಹಿಂತಿರುಗಿದನು.

ಮಾರ್ಕಂಡೇಯರ ತಪಸ್ಸಿಗೆ ಮೆಚ್ಚಿದ ಭಗವಂತ ಅವರ ಕಿವಿಯಲ್ಲಿ ತಾನೇ ಮೃತ್ಯುಂಜಯಸ್ತೋತ್ರವನ್ನು ಅದೃಶ್ಯನಾಗಿ ನಿಂತು ಉಪದೇಶಿಸಿದ.

ವಿಷ್ಣುವಿನಿಂದ ಉಪದಿಷ್ಟವಾದ ಮೃತ್ಯುಂಜಯಸ್ತೋತ್ರವನ್ನು ಮಾರ್ಕಂಡೇಯರು ಭಕ್ತಿಯಿಂದ ಪಠಿಸಿದರು.

ಮಾರ್ಕಂಡೇಯರು ಜಪಿಸಿದ ಮೃತ್ಯುಂಜಯಸ್ತೋತ್ರವನ್ನು ಆಲಿಸಿದ ಮೃತ್ಯು ವಿಷ್ಣುದೂತರಿಂದ ಪೀಡಿತನಾಗಿ ಕಣ್ಮರೆಯಾದನು. ಯಾರು ಅಚ್ಯುತನಲ್ಲಿ ಮನವ ನಿಲ್ಲಿಸಿ ಈ ಮೃತ್ಯುಂಜಯಸ್ತೋತ್ರವನ್ನು ಶುಚಿಯಾಗಿ ತ್ರಿಕಾಲದಲ್ಲಿ ಪಠಿಸುವನು ಅವನಿಗೆ ಅಕಾಲಮೃತ್ಯು ಬರುವುದಿಲ್ಲ.

ಮೃತ್ಯುವನ್ನು ಗೆದ್ದು ಮಾರ್ಕಂಡೇಯರು ಮನೆಗೆ ಬಂದರು. ಮಾತಾಪಿತೃಗಳಿಗೆ ಬಹಳ ಸಂತಸವಾಯಿತು. ಭೃಗುಋಷಿಗಳ ಆಜ್ಞೆಯಂತೆ ಮದುವೆಯಾದರು. ವೇದಶಿರಸ್ಸು ಎಂಬ ಮಗನನ್ನು ಪಡೆದರು. ಯಜ್ಞಗಳಿಂದ ನಾರಾಯಣನನ್ನು, ಶ್ರಾದ್ಧದಿಂದ ಪಿತೃಗಳನ್ನು, ಅನ್ನದಾನದಿಂದ ಅತಿಥಿಗಳನ್ನು ಸಂತೋಷಪಡಿಸಿದರು.

ತನ್ನ ಅಪಮೃತ್ಯುವನ್ನು ಪರಿಹರಿಸಿದ ಭಗವಂತನನ್ನು ಕಾಣುವ ಹಂಬಲದಿಂದ ಪ್ರಯಾಗಕ್ಷೇತ್ರಕ್ಕೆ ಬಂದು ಪವಿತ್ರ ತೀರ್ಥದಲ್ಲಿ ಸ್ನಾನ ಮಾಡಿ ವಟವೃಕ್ಷದ ಬುಡದಲ್ಲಿ ತಪಸ್ಸು ಮಾಡಿದರು. ಭಕ್ತಿಯಿಂದ ಸ್ತೋತ್ರ ಮಾಡಿದರು. ಸ್ತೋತ್ರದ ಕೊನೆಯಲ್ಲಿ ವಿಷ್ಣುವಿನ ಅಶರೀರವಾಣಿಯೊಂದು ಕೇಳಿಸಿತು. ಸರ್ವತೀರ್ಥಗಳ ಸ್ನಾನ ಮಾಡದೆ ನಿನಗೆ ಭಗವಂತನ ದರ್ಶನವಾಗದು. ತೀರ್ಥಸ್ನಾನ ಮಾಡಿ ಬಂದು ಮಾರ್ಕಂಡೇಯರು ಭಗವಂತನಲ್ಲಿ ನಿವೇದಿಸಿದರು- ಸ್ವಾಮಿ! ತೀರ್ಥಸ್ನಾನ ಮಾಡಿ ಬಂದಿದ್ದೇನೆ. ನಾನು ಮಾಡಿದ ತೀರ್ಥಸ್ನಾನವು ಯಾವುದರಿಂದ ಸಫಲವಾಗುವುದೋ, ಯಾವುದರಿಂದ ತೀರ್ಥಸ್ನಾನ ಫಲ ಬರುವುದು ಅದನ್ನು ಹೇಳು. ಅಶರೀರವಾಣಿಯ ಮೂಲಕ ಸಕಲತೀರ್ಥಸ್ನಾನಫಲಪ್ರದವಾದ ದಿವ್ಯವಾದ ಸ್ತೋತ್ರವೊಂದನ್ನು ನಾರಾಯಣನು ಉಪದೇಶಿಸಿದನು. ಆ ಸ್ತೋತ್ರದಿಂದ ಭಗವಂತನನ್ನು ಸ್ತುತಿಸಿದರು ಮಾರ್ಕಂಡೇಯರು.

ಮಾರ್ಕಂಡೇಯರ ಸ್ತೋತ್ರಕ್ಕೆ ಪ್ರಸನ್ನನಾಗಿ ಭಗವಂತ ಅವರಿಗೆ

ದರ್ಶನವಿತ್ತ. ಭಗವಂತನನ್ನು ನೋಡಿ ಪುಳಕಿತಗೊಂಡ ಮಾರ್ಕಂಡೇಯರು ಮತ್ತೆ ಮತ್ತೆ ನಮಸ್ಕಾರ ಮಾಡಿ ಆನಂದಬಾಷ್ಪ ಸುರಿಸುತ್ತ ಮತ್ತೆ ಸ್ತೋತ್ರ ಮಾಡಿದರು. ಆ ಸ್ತೋತ್ರದಿಂದ ಪ್ರಸನ್ನನಾದ ಭಗವಂತ ಏನು ಬೇಕಾದರು ವರವನ್ನು ಕೇಳು. ಸಂತುಷ್ಟನಾಗಿದ್ದೇನೆಂದನು.

ನಿನ್ನ ದರ್ಶನದಿಂದ ನಾನು ಕೃತಕೃತ್ಯನಾಗಿದ್ದೇನೆ. ನಿನ್ನಲ್ಲಿ ಅಚಂಚಲವಾದ ಭಕ್ತಿ ನೀಡು. ಪ್ರಸನ್ನನಾಗಿದ್ದರೆ ನಿನ್ನನ್ನು ಬಹುಕಾಲ ಪೂಜೆ ಮಾಡಲು ಚಿರಾಯುಷ್ಯ ನೀಡು ಪ್ರಭು ಎಂದರು ಮಾರ್ಕಂಡೇಯರು.

ಭಗವಂತನು ನುಡಿದ- ಈ ಹಿಂದೆಯೇ ನೀನು ಮೃತ್ಯುವನ್ನು ಗೆದ್ದಾಗಿದೆ. ಚಿರಾಯುಷ್ಯವನ್ನು ನಾನು ದಯಪಾಲಿಸಿದ್ದೇನೆ. ಈಗ ಮುಕ್ತಿಸಾಧನವಾದ ವಿಷ್ಣುಭಕ್ತಿಯು ನಿನಗೆ ಅಚಲವಾಗಿರಲಿ ಎಂದು. ಯಾವ ತೀರ್ಥದಲ್ಲಿ ಮಿಂದು ತಪಸ್ಸು ಮಾಡಿ ನನ್ನ ದರ್ಶನ ಪಡೆದೆಯೋ ಅದು ಮಾರ್ಕಂಡೇಯತೀರ್ಥವೆಂದೇ ಪ್ರಸಿದ್ಧಿಯಾಗುವುದು. ಮತ್ತೊಮ್ಮೆ ಕ್ಷೀರಸಮುದ್ರದಲ್ಲಿ ನಿನಗೆ ನನ್ನ ದರ್ಶನವಾಗುವುದೆಂದನು ಶ್ರೀಹರಿ.

ಮಾರ್ಕಂಡೇಯರು ಸಂತಸದಿಂದ ಹಿಂತಿರುಗಿ ಬಂದರು ತಮ್ಮ ಆಶ್ರಮಕ್ಕೆ. ತಪಸ್ಸು ಅರ್ಚನೆ ಜಪಗಳನ್ನು ಮಾಡುತ್ತ ಅನೇಕ ಋಷಿಗಳಿಗೆ ಎಲ್ಲ ಪುರಾಣಗಳನ್ನು ಉಪದೇಶ ಮಾಡುತ್ತ ಕಾಲವನ್ನು ಸಾರ್ಥಕವಾಗಿ ಕಳೆದರು. ವಿಶೇಷವಾಗಿ ಪಿತೃತತ್ವವನ್ನು ಉಪದೇಶಿಸಿದರು. ಹೀಗೆ ತುಸುಕಾಲ ಕಳೆದ ಮೇಲೆ ಭಗವಂತನ ಮಾತು ನೆನಪಾಗಿ ಅವನ ದರ್ಶನಕ್ಕಾಗಿ ಕ್ಷೀರಸಮುದ್ರಕ್ಕೆ ತೆರಳಿದರು. ಶೇಷಶಾಯಿಯನ್ನು ನೋಡುತ್ತ ಭವ್ಯವಾದ ಸ್ತೋತ್ರ ಮಾಡಿದರು. ಸಂಪ್ರೀತನಾಗಿದ್ದೇನೆ ನಿನ್ನ ತಪಸ್ಸಿನಿಂದ ಸ್ತೋತ್ರದಿಂದ ಕೂಡ. ಕೇಳು ವರ. ಕೇಳಿದ್ದನ್ನು ಕೊಡುತ್ತೇನೆ ಎಂದ ಭಗವಂತ. ಮಾರ್ಕಂಡೇಯರು ರೋಮಾಂಚಿತ ಗಾತ್ರರಾಗಿ ನುಡಿದರು- ಸ್ವಾಮಿನ್! ನಿನ್ನ ಪಾದಪದ್ಮಗಳಲ್ಲಿ ಇನ್ನೂ ಹೆಚ್ಚಿನ ಭಕ್ತಿಯನ್ನು ಅನುಗ್ರಹಿಸು. ನೀನು ತುಷ್ಟನಾಗಿದ್ದರೆ ಮತ್ತೊಂದು ವರವನ್ನು ಕೊಡು. ಯಾವ ನನ್ನ

ಸ್ತೋತ್ರವನ್ನು ಕೇಳಿ ನೀನು ಪ್ರಸನ್ನನಾದೆಯೋ ಯಾರು ಆ ಸ್ತೋತ್ರವನ್ನು ಹೇಳಿ ನಿನ್ನನ್ನು ನಿತ್ಯ ಸಂತೋಷಪಡಿಸುವರೋ ಅವರಿಗೂ ನಿನ್ನ ಲೋಕದಲ್ಲಿ ವಾಸಮಾಡಲು ಅವಕಾಶ ಕೊಡಬೇಕು. ಮೊದಲ ಬಾರಿ ತಪಸ್ಸು ಮಾಡಿದಾಗ ನೀನಿತ್ತ ದೀರ್ಘಾಯುಷ್ಯ ನಿನ್ನ ದರ್ಶನದಿಂದ ಇಂದಿಗೆ ಸಾರ್ಥಕವಾಯಿತು. ನಿನ್ನ ಪಾದಕಮಲವನ್ನು ಪೂಜೆ ಮಾಡುತ್ತ ಇಲ್ಲಿಯೇ ವಾಸಮಾಡಲು ಅವಕಾಶ ಕೊಡು ಸ್ವಾಮಿ!

ಮಾರ್ಕಂಡೇಯ! ನನ್ನಲ್ಲಿ ನಿನಗೆ ಅವ್ಯಭಿಚರಿತವಾದ ಭಕ್ತಿ ಅಭಿವೃದ್ಧಿಯಾಗಲಿ. ಕಾಲಕ್ರಮದಲ್ಲಿ ಆ ಭಕ್ತಿಯಿಂದ ನಿನಗೆ ನಿಶ್ಚಯವಾಗಿಯೂ ಮುಕ್ತಿ ಆಗುವುದು. ನೀನು ಮಾಡಿದ ಸ್ತೋತ್ರವನ್ನು ಯಾರು ನಿತ್ಯ ಸಾಯಂ ಪ್ರಾತಃ ಪಠಿಸುವರೋ ಅವರು ನನ್ನಲ್ಲಿ ದೃಢವಾದ ಭಕ್ತಿಯನ್ನು ಮಾಡಿ ನನ್ನ ಲೋಕದಲ್ಲಿ ಬಂದು ನೆಲೆಸಿ ಆನಂದಪಡುವರು. ಎಂದು ಭಗವಂತನು ಅನುಗ್ರಹಿಸಿದನು. ಇನ್ನು ಮುಂದೆ ನೀನು ಎಲ್ಲಿ ಎಲ್ಲಿ ನನ್ನನ್ನು ಸ್ಮರಿಸುವಿಯೋ ಅಲ್ಲಿಯೇ ಬಂದು ನಿನಗೆ ದರ್ಶನ ಕೊಡುತ್ತೇನೆ. ನಾನು ಭಕ್ತವಶನಾಗಿದ್ದೇನೆಂದೂ ಹರಸಿದ.

---

**ಸಮಸ್ತಲೋಕನಾಥಸ್ಯ ದೇವದೇವಸ್ಯ ಶಾರ್ಙ್ಗಿಣಃ ।**
**ಸಾಕ್ಷಾದ್ ಭಗವತೋ ವಿಷ್ಣೋಃ ಪೂಜನಂ ಜನ್ಮನಃ ಫಲಮ್ ॥**

(ಕೃ.ಮ.೧೪)

ಎಲ್ಲ ಲೋಕದ ಒಡೆಯನು ದೇವದೇವನು ಆದ ಶಾರ್ಙ್ಗಧನುರ್ಧಾರಿಯಾದ ವಿಷ್ಣುವಿನ ಪೂಜೆಯೇ ಜನ್ಮದ ಮುಖ್ಯಫಲ.

# ಭಾಗವತದಲ್ಲಿ ಮಾರ್ಕಂಡೇಯರ ಮಂಗಲಚರಿತ್ರೆ

ಮಾರ್ಕಂಡೇಯರು ವೈಷ್ಣವಧರ್ಮಾನುಷ್ಠಾನ ಮಾಡುತ್ತ ಭಗವಂತನ ಧ್ಯಾನಯೋಗದಿಂದ ಪುನೀತರಾಗಿ 6 ಮನ್ವಂತರಗಳೇ ಕಳೆದವು. ಏಳನೇ ಮನ್ವಂತರದಲ್ಲಿ ಮಾರ್ಕಂಡೇಯರು ಹಿಮಾಲಯದ ಪುಷ್ಪಭದ್ರಾನದೀ ಹಾಗೂ ಚಿತ್ರಾ ಎಂಬ ವಿಶೇಷ ಶಿಲೆಯಿಂದ ಕೂಡಿದ ತಮ್ಮ ಆಶ್ರಮದಲ್ಲಿ ತಪೋಮಗ್ನರಾಗಿದ್ದರು. ಆಗ ದೇವೇಂದ್ರ ಅವರ ತಪೋ ಭಂಗಕ್ಕೆಂದು ತನ್ನ ಲೋಕದ ಅನೇಕ ಅಪ್ಸರಸ್ತ್ರೀಯರನ್ನು ಮನ್ಮಥನನ್ನೂ ಕಳುಹಿದನು. ಶೃಂಗಾರಭಾವಕ್ಕೆ ಉದ್ದೀಪಕವಾಗುವಂತಹ ವಾತಾವರಣ ವನ್ನು ನಿರ್ಮಿಸಿದ.

ಆಶ್ರಮದ ಸುತ್ತ ಬಗೆಬಗೆಯ ಹೂವು ಹಣ್ಣು ನೆರಳಿನ ಮರಗಿಡ ಬಳ್ಳಿಗಳು. ಮತ್ತೆ ಕೋಗಿಲೆಯ ಉನ್ಮಾದಗೀತೆ. ತಂಪಾಗಿ ಹರಿಯುವ ಸಲೀಲ ಸಲಿಲ. ಹೂವಿನ ಕಂಪು, ಹಿಮದ ತಂಪು ತುಂಬಿ ಬೀಸುವ ಮಂದ ಮಾರುತ. ಮಂದಸ್ಮಿತ ಮದನನ ಆವಿರ್ಭಾವ. ಗಂಧರ್ವರ ಮಧುರ ಗಾಯನ, ಮೃದಂಗ ವೀಣಾಪಣವಗಳ ಮಧುರ ನಿನಾದದ ಹಿಮ್ಮೇಳ. ಅಪ್ಸರೆಯರ ಲಾವಣ್ಯ ಸೂಸುವ ವಿವಿಧ ಭಂಗಿಯ ಬಿಂಕ ಬಿನ್ನಾಣದ ನರ್ತನಗಳು. ಪುಂಜಕಸ್ಥಲೀ ಎಂಬ ಅಪ್ಸರೆ ಕಂದುಕದೊಂದಿಗೆ ಆಟವಾಡುತ್ತ ಮುನಿಯ ಮುಂದೆ ಬಂದಳು. ಆಡುವ ಸಂಭ್ರಮದಲ್ಲಿ ಕುಣಿವ ಕುಚಗಳ ಭಾರದಿಂದ ನಡು ನಡುಗಿದೆ. ನಡು ನಡುಗಿ ಮೇಖಲೆ ಶಿಥಿಲವಾಗಿ ಜಾರಿದ ಸೀರೆ ವಾಯುವಿನಿಂದ ದೂರ ಹಾರಿದೆ. ಇದೇ ಸಮಯವೆಂದರಿತ ಸ್ಮರ ಮುನಿಯ ಮನಕೆ ಬಾಣವನ್ನು ಪ್ರಯೋಗಿಸಿದ. ಕಣ್ಮುಚ್ಚಿ ಧ್ಯಾನಮಗ್ನರಾದ ಮಾರ್ಕಂಡೇಯರು ಇವಾವುದಕ್ಕೂ ವಿಚಲಿತರಾಗಲಿಲ್ಲ. ಮುನಿಗಳ ತೇಜಸ್‌ನಿಂದ ಪ್ರತಿಹತರಾಗಿ ಅಪ್ಸರೆಯರು ತೆರಳಿದರು. ಕಾಮನೂ ನಿಸ್ತೇಜನಾದ. ಇಂದ್ರ ಅಚ್ಚರಿಯ ಕಡಲಾದ. ಜಿತೇಂದ್ರಿಯರ ಮುಂದೆ

ನರನಾರಾಯಣರು ಪ್ರಕಟಗೊಂಡರು. ಮಾರ್ಕಂಡೇಯರು ಭಕ್ತಿಯಿಂದ ಸ್ತೋತ್ರ ಮಾಡಿದರು.

ಮುನಿಯೇ! ನಿನ್ನ ಬೃಹದ್ವ್ರತಚರ್ಯೆಯಿಂದ ಸುಪ್ರಸನ್ನರಾಗಿದ್ದೇವೆ. ಬೇಕಾದ ವರವನ್ನು ಕೇಳೆಂದರು ನರನಾರಾಯಣರು. ಪ್ರಲಯ ಮಾಡುವ ನಿನ್ನ ಮಾಯೆಯನ್ನು ನೋಡಬೇಕು ಎಂದು ಮುನಿ ಮಾರ್ಕಂಡೇಯರು ಬಯಸಿದರು. ನಸುನಕ್ಕು ಹಾಗೇ ಆಗಲಿ ಎಂದನು ನಾರಾಯಣ. ನರನಾರಾಯಣರು ಅಂತರ್ಧಾನರಾದರು.

ಕೆಲವು ಕಾಲದ ಬಳಿಕ ಒಮ್ಮೆ ಸಾಯಂ ಸಂಧ್ಯಾಕಾಲ ಭೀಕರ ಬಿರುಗಾಳಿ ಬೀಸಿತು. ಮಿಂಚುಗಳು ತುಂಬಿದವು. ಮುಗಿಲು ಕಪ್ಪಾಯಿತು. ಆಗಸದಿಂದ ವರ್ಷಾಧಾರೆ ಸುರಿದು ಸುರಿದು ನಾಕು ಸಾಗರಗಳು ಉಕ್ಕೇರಿದವು. ಭೂಮಿಯೇ ನೀರಲ್ಲಿ ಮುಳುಗಿತು. ಮೂರು ಲೋಕವನ್ನೂ ನೀರು ಕಬಳಿಸಿತು. ಎಲ್ಲೆಲ್ಲಿಯೂ ಕತ್ತಲೆ ಆವರಿಸಿತು. ರಭಸದ ಹೆದ್ದೆರೆಗಳ ಪ್ರಹಾರಕ್ಕೆ ತುತ್ತಾದ ಮಾರ್ಕಂಡೇಯರು ಒಮ್ಮೆ ಮೋಹವನ್ನು ಒಮ್ಮೆ ದುಃಖವನ್ನು ಒಮ್ಮೆ ಭಯವನ್ನು ಹೊಂದಿದರು. ತಿಮಿಂಗಿಲ ಮುಂತಾದ ಜಲಚರ ಜಂತುಗಳಿಂದ ಪೀಡಿತರಾದರು. ಹಲವು ಸಾವಿರ ವರ್ಷಗಳು ಸಂದವು. ಸಲಿಲ ಪ್ರವಾಹ ಪ್ರಹಾರ ವಿಹಾರಗಳಲ್ಲಿ ಹಣ್ಣಾದರು ಮುನಿಗಳು. ಅಂದೊಮ್ಮೆ ಹಣ್ಣು ಚಿಗುರುಗಳಿಂದ ಶೋಭಿತವಾದ ಸಣ್ಣ ಆಲದ ಮರ ಕಂಡರು. ಪೂರ್ವೋತ್ತರ ದಿಕ್ಕಿಗೆ ಚಾಚಿಕೊಂಡ ಅದರ ಕೊಂಬೆಯ ಎಲೆಯೊಂದರಲ್ಲಿ ಮೈಕಾಂತಿಯಿಂದ ಪ್ರಲಯದ ಕತ್ತಲೆಯನ್ನು ನುಂಗುತ್ತ ಕಾಲಬೆರಳನ್ನು ಬಾಯಿಯಲ್ಲಿಟ್ಟು ಮಲಗಿದ್ದ ಮಂಗಲಸುಂದರ ಶಿಶುವನ್ನು ಕಂಡರು. ಕುತೂಹಲದಿಂದ ಅದರ ಬಳಿಗೆ ಸುಳಿದರು. ಅದರ ಉಸುರಿನೊಂದಿಗೆ ಮಗುವಿನ ಉದರದಲ್ಲಿಯೇ ಹೋದರು. ಅಲ್ಲಿ ಪರ್ವತಗಳು ನದಿಗಳು ದ್ವೀಪಗಳಿಂದ ಸಹಿತ ಪ್ರಪಂಚವನ್ನೆ ಕಂಡರು. ಹಿಮಾಲಯ; ಅದರ ಬಳಿ ಪುಷ್ಪಭದ್ರಾನದೀ. ಅಲ್ಲಿ ತಮ್ಮ ಆಶ್ರಮ. ಅಲ್ಲಿ ಮಿತ್ರ ಮುನಿಗಳು ಎಲ್ಲವನ್ನೂ ಕಂಡರು. ಮತ್ತೊಂದು ಉಸುರಿಗೆ ಹೊರಬಂದರು. ಮತ್ತೆ ಬಿದ್ದರು ಪ್ರಲಯ

ಜಲದಲ್ಲಿ. ಮಗುವಿನ ಮನೋಹರ ನಗುವಿನಿಂದ ಬೆರೆತ ಅಪಾಂಗ ದೃಷ್ಟಿಗೆ ಪಾತ್ರರಾದರು. ಅವನು ಭಗವಂತನೆ ಎಂದು ತಿಳಿಯಿತು. ಅವನನ್ನು ಅಪ್ಪಿ ಕೊಳ್ಳಲು ಮುಂದಾದರು. ಮಗು ಅಂತರ್ಧಾನವಾಯಿತು. ಪ್ರಲಯದ ಪ್ರವಾಹವೂ ಕಣ್ಮರೆಯಾಯಿತು. ಮೊದಲಿನಂತೆಯೇ ತಾವು ಆಶ್ರಮದಲ್ಲಿದ್ದರು.

ಭಗವಂತನ ಪ್ರಲಯದ ಅಗಾಧ ಮಹಿಮೆ ಕಂಡು ಬೆರಗಾದರು. ಅವನಿಗೆ ಶರಣೆಂದರು. ಕಣ್ಮುಚ್ಚಿ ಧ್ಯಾನಕ್ಕೆ ಕುಳಿತರು.

ಆಕಾಶದಲ್ಲಿ ಪಾರ್ವತೀಪರಮೇಶ್ವರರು ಸಂಚರಿಸುತ್ತ ಮಾರ್ಕಂಡೇಯರನ್ನು ಕಂಡರು. ಪಾರ್ವತೀ ಮುನಿಗಳನ್ನು ನೋಡಿ ಅನುಗ್ರಹಿಸಿ ವರ ನೀಡೋಣ ಬನ್ನಿ ಎಂದಳು. ವಿಷ್ಣುಭಕ್ತರು ಏನನ್ನೂ ಏಕೆ ಮೋಕ್ಷವನ್ನೂ ಬಯಸುವುದಿಲ್ಲ. ಆದರೂ ಭಾಗವತರ ಸಮಾಗಮ ಅಪರೂಪ. ಬಾ ಹೋಗೋಣ ಎಂದು ಬಂದರು.

ಶಿವ ಬಂದರೂ ಮುನಿ ಕಣ್ಣು ತೆರೆಯಲೇ ಇಲ್ಲ. ಶಿವ ತನ್ನ ಯೋಗ ಮಾಯೆಯಿಂದ ಮುನಿಯ ಮನದೊಳಗೆ ಹೊಕ್ಕಿದರು. ಕೂಡಲೆ ವಿಸ್ಮಯದಿಂದ ಕಣ್ತೆರೆದರು. ಶೂಲ, ಧನುಸ್, ಬಾಣ, ಖಡ್ಗ, ಗುರಾಣಿ, ಅಕ್ಷಮಾಲೆ, ಡಮರುಗ, ಕಪಾಲಗಳನ್ನು ಹಿಡಿದ ಅಷ್ಟಭುಜದ ಶಿವನನ್ನುಕಂಡ ಮುನಿ ಮಾರ್ಕಂಡೇಯರು ಶಿವನಿಗೆ ವಿಶೇಷ ಪೂಜೆಯನ್ನು ಮಾಡಿದರು. ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದರು.

ಏನು ಬೇಕಾದರೂ ವರವನ್ನು ಕೇಳೆಂದರು ಪರಮೇಶ್ವರ. ಭಗವಂತನಲ್ಲಿ ಅವನ ಭಕ್ತರಲ್ಲಿ ನಿಮ್ಮಲ್ಲಿ ಭಕ್ತಿಯನ್ನು ಕೊಡು ಸಾಕೆಂದರು. ಶಿವ ತಥಾಸ್ತು ಎಂದನಲ್ಲದೆ ಆಕಲ್ಪಾಂತ ಆಯುಷ್ಯ, ಪುಣ್ಯ, ಅಜರಾಮರತ್ವ, ತ್ರಿಕಾಲಜ್ಞಾನ, ವಿಷ್ಣುವಿನ ವಿಜ್ಞಾನ, ವೈರಾಗ್ಯ, ಬ್ರಹ್ಮ ವರ್ಚಸ್ಸು, ಪುರಾಣಾಚಾರ್ಯತ್ವಗಳು ಬರಲೆಂದು ಮನಸಾರೆ ಹರಸಿದರು. ಹಿಂತೆರಳಿದರು. ಮಾರ್ಕಂಡೇಯರು ಕೃತಕೃತ್ಯರಾಗಿ ಭಗವಂತನ ಉಪಾಸನೆಯಲ್ಲಿ ಮುಳುಗಿದರು.

# ಸಪ್ತ ಚಿರಂಜೀವಿಗಳ ಸಂದೇಶ

## ಶ್ರೀವೇದವ್ಯಾಸರು

ಸತ್ಯವತೀ-ಪರಾಶರರ ಮೂಲಕ ಅವತರಿಸಿದ ಸಾಕ್ಷಾತ್ ನಾರಾಯಣನ ಅವತಾರ ಶ್ರೀವೇದವ್ಯಾಸರು. ವೇದಗಳ ವಿಭಾಗ, ವೇದಾರ್ಥನಿರ್ಣಾಯಕ ಬ್ರಹ್ಮಸೂತ್ರರಚನೆ, ವೇದೋಕ್ತ ಪ್ರಮೇಯಗಳನ್ನು ಕಥೆಗಳ ಮೂಲಕ ಸಮರ್ಥವಾಗಿ ನಿರೂಪಿಸುವ ಶ್ರೀಮಹಾಭಾರತ ಹಾಗೂ ಭಾಗವತಾದಿ ಹದಿನೆಂಟು ಪುರಾಣಗಳ ರಚನೆ ವೇದವ್ಯಾಸರ ಸರ್ವಜ್ಞತೆಗೆ ಸಾಕ್ಷಿಯಾಗಿವೆ.

ಸಜ್ಜನರ ಮನಸ್ಸಿನಲ್ಲಿದ್ದ ಕಲಿಯನ್ನು ಶಾಸ್ತ್ರಶಸ್ತ್ರದಿಂದ ಓಡಿಸಿ ತತ್ವಜ್ಞಾನ ದಯಪಾಲಿಸಿದ ಕರುಣಾಳು. ದ್ವಾಪರದಲ್ಲಿ ಅವತರಿಸಿ ಇಂದಿಗೂ ಚಿಕ್ಕ ಬದರಿಯಲ್ಲಿ ಸನ್ನಿಹಿತರಾಗಿ ಶ್ರೀಮಧ್ವಾಚಾರ್ಯರಿಗೆ ಉಪದೇಶಿಸುತ್ತಿರುವ ಅವತಾರದೃಷ್ಟಿಯಲ್ಲಿ ಚಿರಂಜೀವಿ ಎನ್ನಿಸಿರುವರು. ಸಜ್ಜನರಾದ ಪಾಂಡವರನ್ನು ಎಲ್ಲ ಕಾಲದಲ್ಲೂ ಬಂದು ತಮ್ಮ ನಿರ್ಣಯಗಳ ಮೂಲಕ ಸಂರಕ್ಷಣೆ ಮಾಡಿದ ಭಕ್ತವತ್ಸಲಮೂರ್ತಿ.

ಮೋಕ್ಷಸಾಧನವಾದ ತತ್ವಜ್ಞಾನವನ್ನು ಪಡೆಯಲು ಶ್ರೀವೇದವ್ಯಾಸರ ವಿಶೇಷಾನುಗ್ರಹ ಬೇಕೇ ಬೇಕು. ವಿಷಯಸುಖದಲ್ಲಿಯೇ ಮುಳುಗದೆ ತತ್ವಜ್ಞಾನವನ್ನು ಸಂಪಾದಿಸುವುದೇ ಜೀವನದ ಪರಮ ಕರ್ತವ್ಯ. ನಮ್ಮಲ್ಲಿರುವ ಅಜ್ಞಾನ, ಸಂಶಯ, ವಿಪರೀತ ಜ್ಞಾನಗಳು ನಾಶವಾಗಿ ತತ್ವಜ್ಞಾನ ಪಡೆದು ಭಕ್ತಿಯನ್ನು ಅಭಿವೃದ್ಧಿಪಡಿಸಿಕೊಂಡು ಮುಕ್ತಿಪಡೆಯಲು ವೇದವ್ಯಾಸರನ್ನು ನಿತ್ಯ ಸ್ಮರಿಸಬೇಕು.

## ಪರಶುರಾಮ

ಜಮದಗ್ನಿ-ರೇಣುಕೆಯರ ಪುತ್ರನಾಗಿ ಅವತರಿಸಿ ಕ್ಷತ್ರಿಯರಾಗಿ ಜನಿಸಿದ ದುರುಳ ಅಸುರರನ್ನು ಸಂಹಾರ ಮಾಡಿ ಧರ್ಮವನ್ನು ಸಂರಕ್ಷಿಸಿದ ಮಹಾನುಭಾವರೂಪ ಪರಶುರಾಮ. ತಂದೆಯ ಆಜ್ಞೆಯಂತೆ ಪರಪುರುಷನೆಡೆ ಮನ ಹರಿಸಿದ ತಾಯಿಯ ಶಿರಶ್ಛೇದ ಮಾಡಿ ತಂದೆಯ ವರದಿಂದಲೆ ತಾಯಿಯನ್ನು ಮತ್ತೆ ಬದುಕಿಸಿದ ಚಮತ್ಕಾರ ರೂಪ. ತನ್ನ ತಂದೆಯನ್ನು ಕೊಂದು ಧೇನುವನ್ನು ಅಪಹರಿಸಿದ ಕಾರ್ತವೀರ್ಯಾರ್ಜುನನ ಸಾವಿರ ತೋಳು ಕತ್ತರಿಸಿದ ಉಗ್ರರೂಪ. 21 ಬಾರಿ ದುಷ್ಟ ಕ್ಷತ್ರಿಯರನ್ನು ಸಂಹರಿಸಿ ವಶಪಡಿಸಿಕೊಂಡ ಭೂಮಿಯನ್ನೆಲ್ಲ ಬ್ರಾಹ್ಮಣರಿಗೆ ಧಾರೆಯೆರೆದು ಸಮುದ್ರವನ್ನೆ ಹಿಂದಕ್ಕೆ ತಳ್ಳಿ ಪರಶುರಾಮ ಕ್ಷೇತ್ರವನ್ನು ರೂಪಿಸಿಕೊಂಡ ಉದಾರ ಸಮರ್ಥರೂಪ. ನಮ್ಮಲ್ಲಿರಬಹುದಾದ ಸಾತ್ವಿಕರ ಮೇಲೆ ನಡೆಸುವ ದೌರ್ಜನ್ಯದ ದೋಷ, ಗೋ ಮುಂತಾದ ಪೂಜ್ಯಗಳಾದ ಪರದ್ರವ್ಯಗಳನ್ನು ಅಪಹರಿಸುವ ದೋಷಗಳನ್ನು ಖಂಡಿಸಿ ಮಾತಾಪಿತೃಗಳಿಗೆ ಗೌರವವೀಯುವ ಬುದ್ಧಿ ಕೊಡುವಂತೆ ಶ್ರೀಪರಶುರಾಮನಲ್ಲಿ ಪ್ರಾರ್ಥಿಸಬೇಕು. ರಾಮಾವತಾರ, ಕೃಷ್ಣಾವತಾರಗಳಿಂದ ಹಿಡಿದು ಇಂದಿಗೂ ಭೂಮಿಯಲ್ಲಿ ನೆಲೆಸಿರುವ ದೀರ್ಘಕಾಲದ ಚಿರಂಜೀವಿರೂಪ ಪರಶುರಾಮ.

## ಹನುಮಂತ

ಅಂಜನಾ-ಕೇಸರಿಯರ ತನಯನಾಗಿ ಭಗವದಾಜ್ಞೆಯಿಂದ ಶ್ರೀರಾಮನ ಭೂಭಾರಹರಣ ಕಾರ್ಯದಲ್ಲಿ ಪ್ರಧಾನಾಂಗರಾಗಿ ಅವತರಿಸಿದ ವಾಯುದೇವರ ಪ್ರಥಮಾವತಾರ ಹನುಮಂತ. ಜಗದ ಎಲ್ಲ ಸದ್ಗುಣಗಳ ತವರು ಭೂಮಿಯಾಗಿ ಭಗವಂತನ ನೆಮ್ಮನೆಯಾಗಿರುವ ರೂಪ. ಅಸುರ ಸಂಹಾರವನ್ನೂ ಶ್ರೀರಾಮಚಂದ್ರನ ಪೂಜೆಯೆಂಬ ಅನುಸಂಧಾನದಿಂದ ನಡೆಸಿದ ಭಾಗವತೋತ್ತಮ. ಸಹಭೋಗ

ಭಾಗ್ಯವನ್ನು ಭಾವಿ ಬ್ರಹ್ಮ ಪದವಿಯನ್ನು ಶ್ರೀರಾಮನು ಅನುಗ್ರಹಿಸಿದರೆ ಕ್ಷಣಕ್ಷಣದಲ್ಲಿ ಎಲ್ಲ ಜೀವರಾಶಿಗಿಂತಲೂ ಅತ್ಯಧಿಕವಾಗಿ ಭಕ್ತಿ ಅಭಿವೃದ್ಧಿಯಾಗಲೆಂದು ಬೇಡಿ ಭಗವಂತನ ಗುಣಗಾಯನ ಮಾಡುತ್ತ ಕಿಂಪುರುಷ ಖಂಡದಲ್ಲಿ ಇಂದಿಗೂ ನೆಲೆಸಿರುವ ಚಿರಂಜೀವಿರೂಪ ಹನುಮಂತ. ಬುದ್ಧಿ ಬಲ ಯಶಸ್ ಧೈರ್ಯ ನಿರ್ಭಯತನ, ಆರೋಗ್ಯ, ಅಜಾಡ್ಯ, ವಾಕ್ಪಟುತ್ವವನ್ನು ತನ್ನ ಸ್ಮರಣೆ ಮಾತ್ರದಿ ಕೊಡುವ ದಯಾಮಯ ಬ್ರಹ್ಮಚಾರಿರೂಪ.

**ಅಶ್ವತ್ಥಾಮ**

ದ್ರೋಣ-ಕೃಪಿಯರ ತನಯನಾಗಿ ಅವತರಿಸಿದ ರುದ್ರಾವತಾರ ರೂಪ. ಭೂಭಾರಹರಣ ಕಾರ್ಯದಲ್ಲಿ ಭಗವಂತನ ಸೇವೆ ಸಲ್ಲಿಸಲು ಅವನ ಅಂತರಂಗದ ಪ್ರಚೋದನೆಯಿಂದಲೆ ದುರ್ಯೋಧನನ ಕಡೆ ನಿಂತ ರೂಪ. ಕಲಿಯ ಪ್ರಭಾವದಿಂದ ಬ್ರಹ್ಮಚಾರಿಯಾದರೂ ದುರ್ಯೋಧನನ ವಂಶ ಬೆಳೆಸುವ ಮಾತು ಕೊಟ್ಟು ಅಸುರಸಹವಾಸದ ಪ್ರಭಾವವನ್ನು ನಮಗೆ ಮನವರಿಕೆ ಮಾಡಿಕೊಟ್ಟ ರೂಪ. ಕೃಷ್ಣನ ಸಂಕಲ್ಪಕ್ಕೆ ವಿರುದ್ಧವಾಗಿ ಪರೀಕ್ಷಿತನನ್ನು ಕೊಲ್ಲುತ್ತೇನೆಂದು ಹಠ ಮಾಡಿ ವ್ಯಾಸ-ಕೃಷ್ಣ ರೂಪದಿಂದ ಶಾಪ ಪಡೆದು ಕ್ಷಮೆ ಕೇಳಿ ಮುಂದಿನ ಮನ್ವಂತರದಲ್ಲಿ ವೇದವ್ಯಾಸಾಚಾರ್ಯನ ಮಾರ್ಗದರ್ಶನದಲ್ಲಿ ವೇದವಿಭಾಗ ಮಾಡುವಂತಹ ಚಿರಂಜೀವಿ ರೂಪ. ಹರಿ ಚಿತ್ತ ಸತ್ಯ ನರಚಿತ್ತ ಲವಲೇಶವಿಲ್ಲೆಂದು ತೋರಿದ ರೂಪ. ದುರ್ಯೋಧನನ ಮನೆಯ ಹಾಲು ತನ್ನ ಸಾಧನೆಗೆ ಹಾಲಾಹಲವಾಯಿತೆಂದು ತಿಳಿಸಿದರೂಪ. ದುಷ್ಟರ ಮನೆಯ ದುಷ್ಟಾಹಾರ ಮನಸ್ಸನ್ನು ಕಲುಷಿತವಾಗಿಸುವುದೆಂದು ಸಾರಿದ ರೂಪ.

## ಕೃಪ

ಶರದ್ವಾನ್ ಎಂಬ ಮುನಿಯು ತಪಸ್ಸಿನಲ್ಲಿದ್ದಾಗ ಊರ್ವಶಿಯನ್ನು ಕಂಡ. ಆಗ ಸ್ಖಲನಗೊಂಡ ರೇತಸ್ಸು ಜೊಂಡಿನ ಪೊದೆಯಲ್ಲಿ ಬಿತ್ತು. ಏಕಾದಶರುದ್ರರಲ್ಲಿ ಒಬ್ಬರಾದ ವಿಷ್ಕಂಭ ಎಂಬ ರುದ್ರ ಭಗವಂತನ ಭೂಭಾರಹರಣ ಕಾರ್ಯದಲ್ಲಿ ಅಂಗವಾಗುವುದಕ್ಕೋಸ್ಕರ ಶರದ್ವಂತರ ಮಗನಾಗಿ ಜನಿಸಿದರು. ಗಂಡು ಹೆಣ್ಣು ಅವಳಿ ಮಕ್ಕಳು ಜನಿಸಿದರು. ಬೇಟೆಗೆಂದು ಬರುವ ಶಂತನು ಈ ಮಗುವನ್ನು ಪರಿಪಾಲಿಸುವನೆಂದು ಶರದ್ವಂತರು ಆ ಮಕ್ಕಳನ್ನು ಹಾಗೇ ಬಿಟ್ಟು ಹೋದರು. ಬೇಟೆಗೆಂದು ಬಂದ ಶಂತನು ಆ ಮಕ್ಕಳನ್ನು ನೋಡಿ ಕೃಪೆಯಿಂದ ಮನೆಗೆ ತೆಗೆದುಕೊಂಡು ಹೋದನು. ಶಂತನುವಿನ ಕೃಪೆಗೆ ಪಾತ್ರರಾದ ಆ ಅವಳಿ ಮಕ್ಕಳು ಕೃಪ-ಕೃಪಿ ಎಂದೇ ಪ್ರಸಿದ್ಧರಾದರು.

ಕೃಪರು ವಿಷ್ಣುವನ್ನು ಕುರಿತು ತಪಸ್ಸನ್ನು ಆಚರಿಸಿದರು. ಪ್ರಸನ್ನನಾದ ವಿಷ್ಣುವು ಕೃಪರನ್ನು ಮುಂದಿನ ಮನ್ವಂತರದಲ್ಲಿ ಸಪ್ತರ್ಷಿಗಳಲ್ಲಿ ಒಬ್ಬರನ್ನಾಗಿಸಿದನು. ವೈವಸ್ವತಮನುಕಲ್ಪಪರ್ಯಂತ ಆಯುಷ್ಯವನ್ನೂ ಕರುಣಿಸಿದನು. ಕೃಪರು ಈ ಕಲ್ಪದ ಸಪ್ತಚಿರಂಜೀವಿಗಳಲ್ಲಿಯೂ ಒಬ್ಬರೆನಿಸಿದರು. ಶಂತನುವಿನ ಮನೆಯಲ್ಲೇ ಬೆಳೆದು ದೇವವ್ರತ ಭೀಷ್ಮರ ಗೆಳೆಯರಾದರು. ಕೌರವರ ಪಕ್ಷದಲ್ಲಿದ್ದರೂ ಪಾಂಡವರ ಪಕ್ಷಪಾತಿಗಳಾಗಿದ್ದರು. ಧರ್ಮ ಪರವಾಗಿದ್ದರು.

ತಪಸ್ಸು ಮಾಡಿ ಧರ್ಮನಿಷ್ಠರಾಗಿ ಆಯುಷ್ಯವೃದ್ಧಿ ಮಾಡಿಕೊಂಡು ಭಗವಂತನ ಸೇವೆ ಮಾಡಿಕೊಂಡು ಸಾರ್ಥಕಜೀವನ ನಡೆಸಬೇಕು ಎಂದು ಕೃಪಾಚಾರ್ಯರು ತಿಳಿಸಿರುವರು.

## ವಿಭೀಷಣ

ಪುಲಸ್ತ್ಯಪುತ್ರರಾದ ವಿಶ್ರವಸ್ ಮುನಿಯ ಪತ್ನಿ ಕೈಕಸಿಯಲ್ಲಿ ರಾವಣ

ಕುಂಭಕರ್ಣ ಶೂರ್ಪಣಖಿಯರ ಅನಂತರದ ಮಗನಾಗಿ ಜನಿಸಿದವನು ವಿಭೀಷಣ.

ಒಂದೇ ಪಾದದಿಂದ ನಿಂತು ಹೃದಯಕಮಲದಲ್ಲಿ ಮುಕುಂದನನ್ನು ನೆನೆಯುತ್ತ ತಪಸ್ಸುಮಾಡಿ ಧರ್ಮಪರಾಯಣನಾದ ವಿಭೀಷಣನು ಭಗವಂತನಿಂದ ಎಂತಹ ಮಹಾ ಆಪತ್ಕಾಲದಲ್ಲಿಯೂ ಧರ್ಮದಲ್ಲಿಯೇ ನನ್ನ ಬುದ್ಧಿ ಇರಲೆಂದು, ಹಾಗು ಕಲಿಯದೆ ವರಾಸ್ತ್ರಸಿದ್ದಿಸಲೆಂದು ಎರಡು ವರಗಳನ್ನು ಪಡೆದ.

ರಾಮದೂತನಾಗಿ ಬಂದ ಹನುಮಂತನನ್ನು ರಾವಣನು ಕೊಲ್ಲಲು ಆದೇಶಿಸಿದಾಗ ದೂತನನ್ನು ಕೊಲ್ಲುವುದು ಅಧರ್ಮವೆಂದು ಹೇಳಿ ತಡೆದು ಧರ್ಮನಿಷ್ಠೆ ತೋರಿದ.

ಶ್ರೀರಾಮಚಂದ್ರ ಸಮುದ್ರತೀರದಲ್ಲಿ ದರ್ಭಶಯನನಾಗಿದ್ದ ಸಂದರ್ಭದಲ್ಲಿ ರಾವಣನಿಂದ ಪರಿತ್ಯಕ್ತನಾಗಿ ಶರಣಾಗತನಾಗಿ ಬಂದ. ಎಲ್ಲ ಕಪಿಗಳೂ ಶತ್ರುವಿನ ತಮ್ಮನೆಂದು ಸ್ವೀಕರಿಸದಿರುವಂತೆ ಸಲಹೆಯಿತ್ತಾಗ್ಗ ಹನುಮಂತ, ವಿಭೀಷಣ ನಿಜವಾಗಿ ರಾಮಭಕ್ತ. ಅಣ್ಣ ರಾವಣ ನಾಶವಾಗಲಿರುವನೆಂದು ತಿಳಿದು ರಾಜ್ಯವನ್ನು ಅನುಭವಿಸಲು ಇಲ್ಲಿ ಶರಣಾಗಿ ಬಂದಿರುವನು. ಅವಶ್ಯವಾಗಿ ಸ್ವೀಕಾರಾರ್ಹ ಎಂದು ಶಿಫಾರಸ್ಸು ಮಾಡಿದಾಗ ರಾಮನಿಂದ ಸ್ವೀಕೃತನಾದ ಭಾಗ್ಯಶಾಲಿ. ಒಮ್ಮೆ ನನ್ನಲ್ಲಿ ಯಾರು ಅನನ್ಯವಾಗಿ ಶರಣಾಗುತ್ತಾರೆ. ಅವರನ್ನು ಎಂದಿಗೂ ಕೈ ಬಿಡದೆ ಕಾಯುತ್ತೇನೆಂದು ಶ್ರೀರಾಮ ಇದೇ ಸಂದರ್ಭದಲ್ಲಿ ಪ್ರತಿಜ್ಞೆಮಾಡಿದ.

ಶ್ರೀರಾಮ ರಾವಣ ಬದುಕಿರುವಾಗಲೆ ವಿಭೀಷಣನಿಗೆ ರಾಕ್ಷಸ ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕಗೈದ. ಕಲ್ಪಾಂತದವರೆಗೆ ರಾಕ್ಷಸಾಧಿಪತ್ಯ ಸಹಿತವಾದ ಆಯುಷ್ಯವನ್ನೂ ಅದರ ಕೊನೆಯಲ್ಲಿ ತನ್ನ ಲೋಕದ ಪ್ರಾಪ್ತಿಯನ್ನು ಕರುಣಿಸಿದ ಶ್ರೀರಾಮಚಂದ್ರ.

ಶ್ರೀರಾಮನ ಪಟ್ಟಾಭಿಷೇಕ ಸಮಯದಲ್ಲಿ ಇಕ್ಷ್ವಾಕುವಿನಿಂದ ಬಂದ

ರಂಗನಾಥನ ಪ್ರತಿಮೆಯನ್ನು ಅವನಿಂದ ಸ್ವೀಕರಿಸಿ ಹೋಗುವಾಗ ಆಹ್ನಿಕಕ್ಕೆಂದು ಕಾವೇರಿಯ ತೀರದಲ್ಲಿಟ್ಟ. ಮುಂದೆ ಅದೇ ಶ್ರೀರಂಗಕ್ಷೇತ್ರವೆಂದು ಇಂದಿಗೂ ಪ್ರಸಿದ್ಧವಾಗಿದೆ. ಇಂದಿಗೂ ವಿಭೀಷಣ ಮುಂಜಾನೆ ಅದೃಶ್ಯನಾಗಿ ಬಂದು ಶ್ರೀರಂಗನಾಥನ ಪೂಜೆ ಮಾಡುವನೆಂದು ಪುರಾಣಗಳಲ್ಲಿ ತಿಳಿಸಲಾಗಿದೆ.

ಒಡಹುಟ್ಟಿದವರು ಭಗವದ್ ದ್ವೇಷಿಗಳಾದರೂ ತಾನು ರಾಮಭಕ್ತನಾಗಿ ಹನುಮಂತನ ಶಿಫಾರಸ್ಸಿನಿಂದ ರಾಮನಿಂದ ಸ್ವೀಕೃತನಾಗಿ ಸಾಮ್ರಾಜ್ಯಸುಖವನ್ನು ಕಲ್ಪಾಂತ ಆಯುಷ್ಯವನ್ನು ಪಡೆದ ಪುಣ್ಯಾತ್ಮ ವಿಭೀಷಣ. ಮಾನವರು ಧರ್ಮಪರಾಯಣರಾಗಿ ಹರಿವಾಯುಗಳ ಅನುಗ್ರಹಕ್ಕೆ ಪಾತ್ರರಾದರೆ ಆಯುಷ್ಯವೃದ್ಧಿಯಾಗುವುದರ ಜೊತೆಗೆ ಸಾರ್ಥಕವೂ ಆಗುವುದೆಂದು ತಿಳಿಸಿದವನು.

## ಬಲಿ

ಪ್ರಹ್ಲಾದನ ಪುತ್ರ ವಿರೋಚನನ ಮಗ ಬಲಿ ಚಕ್ರವರ್ತಿ. ಪ್ರಹ್ಲಾದ ನರಸಿಂಹಾವತಾರಕ್ಕೆ ಕಾರಣನಾದರೆ ಬಲಿ ವಾಮನಾವತಾರಕ್ಕೆ ನಿಮಿತ್ತನಾದ. ಶುಕ್ರಾಚಾರ್ಯರ ಆಶೀರ್ವಾದದಿಂದ ಬಲಿಷ್ಠನಾದ ಬಲಿ ತನ್ನ ಯಜ್ಞಶಾಲೆಗೆ ಬಂದ ವಾಮನನನ್ನು ಸತ್ಕರಿಸಿ ಶುಕ್ರಾಚಾರ್ಯರ ಮಾತನ್ನೂ ಕೇಳದೆ ಅವರ ಶಾಪಕ್ಕೆ ತುತ್ತಾದರೂ ಕೇಳಿದ್ದನ್ನು ಕೊಡುತ್ತೇನೆಂದು ವಚನವಿತ್ತ. ಮೂರನೆ ಹೆಜ್ಜೆಗೆ ಸ್ಥಳವೆಲ್ಲಿಯೆಂದು ಕೇಳಿದಾಗ ತನ್ನ ತಲೆಯನ್ನೇ ಅರ್ಪಿಸಿ ಭಗವಂತನ ವಿಶೇಷ ಅನುಗ್ರಹಕ್ಕೆ ಪಾತ್ರನಾದ. ವಾಮನ ತ್ರಿವಿಕ್ರಮನಾದ. ಸುತಲಲೋಕದ ಆಧಿಪತ್ಯ ಕೊಟ್ಟಿದ್ದಲ್ಲದೇ ತಾನೇ ದ್ವಾರಪಾಲಕನಾಗಿ ರಕ್ಷಣ ಮಾಡಿದ. ಮುಂದಿನ ಮನ್ವಂತರದಲ್ಲಿ ಇಂದ್ರನಾಗೆಂದು ಅನುಗ್ರಹಿಸಿದ. ಇಂತಹ ಭಗವಂತನ ವಿಶೇಷಾನುಗ್ರಹಕ್ಕೆ ಪಾತ್ರನಾದ ಬಲಿಚಕ್ರವರ್ತಿ.

ಮುಂದೊಮ್ಮೆ ಭಗವಂತ ವೈಕುಂಠದ ಅಮುಕ್ತಸ್ಥಾನದಲ್ಲಿ ಬಂದು

ನೆಲೆಸಿದಾಗ ಬಲಿ ಎಂಬ ಅಸುರನ ಆವೇಶಕ್ಕೆ ಒಳಗಾಗಿ ಅವನ ಕಿರೀಟವನ್ನೆ ಕದ್ದ. ಗರುಡ ಅವನನ್ನು ಸುತಲಲೋಕದ ವರೆಗೆ ಬೆನ್ನಟ್ಟಿ ಹೋಗಿ ಸೋಲಿಸಿ ಕಿರೀಟವನ್ನು ತಂದು ಗೋಮಂತ ಪರ್ವತದಲ್ಲಿದ್ದ ಶ್ರೀಕೃಷ್ಣನಿಗೆ ಅರ್ಪಿಸಿದ. ಬಲಿಯಲ್ಲಿದ್ದ ದೋಷ ಪರಿಹಾರವಾಗಲೆಂದು ಕಿರೀಟ ಕದಿಯಲು ಬಂದಾಗ ಅವಕಾಶ ಮಾಡಿಕೊಟ್ಟ ಭಗವಂತ.

ಯಾರನ್ನು ಅನುಗ್ರಹ ಮಾಡಲು ಬಯಸುತ್ತೇನೆ ಮೊದಲು ಅವರ ಸಂಪತ್ತನ್ನು ಕಸಿಯುತ್ತೇನೆಂದು ಹೇಳಿ ಬಲಿಯಿಂದ ಎಲ್ಲವನ್ನು ದಾನದ ನೆಪದಲ್ಲಿ ಪಡೆದು ಮತ್ತೆ ಪರಮಾನುಗ್ರಹ ಮಾಡಿದ ಭಗವಂತ. ಬಲಿ ನೀಡಿದ ದಾನಕ್ಕೆ ಸುತಲಲೋಕಾಧಿಪತ್ಯವಾಗಲಿ, ಇಂದ್ರಪದವಿಯಾಗಲಿ ಮುಖ್ಯಫಲವಲ್ಲ. ಮೋಕ್ಷದಲ್ಲಿ ಆನಂದಾತಿಶಯವೇ ಮುಖ್ಯಫಲ.

ಸತ್ಪಾತ್ರರಿಗೆ ವಿನಿಯೋಗ ಮಾಡುವ ಸಂದರ್ಭ ಬಂದಾಗ ಯಾರ ವಿರೋಧವನ್ನೂ ಲೆಕ್ಕಿಸದೆ ದಾನ ನೀಡಬೇಕು ಭಗವಂತ ಪ್ರೀತನಾಗಲೆಂದು. ಆಗ ಶ್ರೀಹರಿಯ ವಿಶೇಷಾನುಗ್ರಹ ಪಾತ್ರರಾಗುತ್ತೇವೆ. ಅಸುರ ಸಹವಾಸವಾದರೆ ಭಗವಂತನ ಸ್ವತ್ತನ್ನೇ ಕದಿಯುವ ದುರ್ಬುದ್ಧಿಯೂ ಬರುತ್ತದೆ ಎಂಬುದು ಬಲಿಯಿಂದ ನಾವು ಕಲಿಯಬೇಕಾದ ಪಾಠ.

## ಪ್ರಹ್ಲಾದ

ತಂದೆ ಭಗವಂತನನ್ನು ದ್ವೇಷಮಾಡಿದ ಸುರಾರಿ ಹಿರಣ್ಯಕಶಿಪು. ಪತ್ನಿ ಕಯಾಧುವಿನಲ್ಲಿ ಅವನಿಗೆ ಹುಟ್ಟಿದ ಮಗನೆ ಪ್ರಹ್ಲಾದ. ಸತ್ಯಸಂಧ, ಜಿತೇಂದ್ರಿಯ, ಭಾಗವತೋತ್ತಮ. ಆಟವನ್ನು ಬಿಟ್ಟು ಭಗವಂತನನ್ನೆ ನೆನೆಯುತ್ತ ಮೈಮರೆಯುತ್ತಿದ್ದವ.

ಶಂಡಾಮರ್ಕರ ಶಾಲೆಯಲ್ಲಿ ಸೇರಿದರೂ ಅವರ ಪಾಠ ಗ್ರಹಿಸಲಿಲ್ಲ. ತನ್ನ ತಾಯಿಯ ಗರ್ಭದಲ್ಲಿರುವಾಗಲೇ ನಾರದರಿಂದ ಉಪದೇಶ ಪಡೆದ ಮಹಾನುಭಾವ. ಹರಿನಿಷ್ಠೆಯಿಂದ ಹಿರಣ್ಯಕಶಿಪು ನೀಡಿದ ಎಲ್ಲ ಹಿಂಸೆಯಲ್ಲಿ

ಸುರಕ್ಷಿತನಾದವ. ನಂಬಿ ಕೆಟ್ಟವರಿಲ್ಲವೋ ರಂಗಯ್ಯನ ಎಂದು ತೋರಿಸಿಕೊಟ್ಟವ.

ಅಸುರ ಮಕ್ಕಳಿಗೂ ಅಧ್ಯಾತ್ಮ ಕಲಿಸಿದವ. ಎಲ್ಲರಂತರ್ಯಾಮಿಯಾದ ಭಗವಂತನ ಆರಾಧನೆಯೇ ಜೀವನದ ಸಾಧನೆ ಎಂದು ಹೇಳಿದವ. ನೂರು ವರ್ಷದ ಆಯುಷ್ಯದಲ್ಲಿ ಅರಿವಿಲ್ಲದೆ ಬಾಲ್ಯ, ಶಕ್ತಿಯಿಲ್ಲದೆ ವೃದ್ಧಾಪ್ಯ, ವಿವೇಕವಿಲ್ಲದೆ ವಿಷಯಭೋಗದಿಂದ ತಾರುಣ್ಯದ ವಯಸ್ಸು ಹಾಳಾಗುತ್ತದೆ. ಆದ್ದರಿಂದ ಕೌಮಾರ ವಯಸ್ಸಿನಿಂದಲೇ ಭಾಗವತ ಧರ್ಮವನ್ನು ಅನುಷ್ಠಾನ ಮಾಡಬೇಕು. ಮನುಷ್ಯ ಜನ್ಮ ಒಂದೇ ಸಾಧನೆಗೆ ಮಾರ್ಗ. ಅದು ದೊರೆಯುವುದು ದುರ್ಲಭ. ದೊರೆತರೆ ಹೆಚ್ಚು ಕಾಲ ಉಳಿಯುವುದಿಲ್ಲ. ಅಷ್ಟರೊಳಗೆ ಸಾಧನೆ ಮಾಡಿ ಪಾಥೇಯವ ಕಟ್ಟಿರೋ ಪರಲೋಕಕೆ ಎಂದು ಹೇಳಿದವನು.

ನರಸಿಂಹನೇ ಸ್ತಂಭದಲ್ಲಿ ಪ್ರಕಟನಾಗಿ ಸಂಸ್ತುತನಾಗಿ ಪ್ರಸನ್ನನಾಗಿ ವರ ಕೇಳು ಎಂದಾಗ ನಿನ್ನಲ್ಲಿ ವರ ಕೇಳುವ ಬುದ್ಧಿ ಬಾರದಿರಲೆಂದು ವರ ಕೇಳಿದ ಏಕಾಂತ ಭಕ್ತಿಯ ಭಾಗವತೋತ್ತಮ. ಈ ಮನ್ವಂತರದ ಕೊನೆಯವರೆಗೆ ರಾಜ್ಯಭೋಗವನ್ನು ಅನುಭವಿಸಿ ಮುಂದೆ ಕಾಲಕ್ರಮವಾಗಿ ನನ್ನನ್ನು ಸೇರುವವನಾಗೆಂದು ನರಸಿಂಹನು ಅನುಗ್ರಹಿಸಿದನು. ಹಿರಣ್ಯಕಶಿಪುವಿಗೆ ವಿಷ್ಣುವಿನ ಮಗ ಬ್ರಹ್ಮ ವರ ನೀಡಿದರೆ ಹಿರಣ್ಯಕಶಿಪುವಿನ ಮಗ ಪ್ರಹ್ಲಾದನಿಗೆ ಬ್ರಹ್ಮನ ಅಪ್ಪ ನರಸಿಂಹ ವರ ನೀಡಿದ ವಿಶೇಷವನ್ನು ಗಮನಿಸಬೇಕು.

ಸಣ್ಣ ವಯಸ್ಸಿನಿಂದಲೆ ಧರ್ಮಾಚರಣೆ, ದೇವರು ಎಲ್ಲೆಡೆಯು ಇದ್ದಾರೆಂಬ ಬಲವಾದ ನಂಬಿಕೆ, ದೇವರಲ್ಲಿ ಯಾವ ಐಹಿಕಫಲಗಳನ್ನು ಕೇಳಬಾರದೆಂಬ ಪಾಠವನ್ನು ಪ್ರಹ್ಲಾದನಿಂದ ನಾವು ಕಲಿಯಬೇಕಿದೆ.

# ಆಚಾರ್ಯ ಮಧ್ವರ ತಂತ್ರಸಾರಸಂಗ್ರಹದಲ್ಲಿ ಧನ್ವಂತರಿ

-ಬನ್ನಂಜೆ ಗೋವಿಂದಾಚಾರ್ಯ

**ಸ್ವಯಮುದ್ದೇಶವಾನ್ ಪೂರ್ವವರ್ಣಪೂರ್ವೋ ನಮೋಯುತಃ ।**
**ಧಾನ್ವಂತರೋ ಮಹಾಮಂತ್ರಃ ಸಂಸೃತಿವ್ಯಾಧಿನಾಶನಃ ॥**

ಚತುರ್ಥ್ಯಂತವಾದ ಧನ್ವಂತರಿಶಬ್ದದ ಪೂರ್ವೋತ್ತರಗಳಲ್ಲಿ ಹೆಸರಿನ ಪ್ರಥಮಾಕ್ಷರವಾದ ಧಕಾರ ಮತ್ತು 'ನಮಃ' ಶಬ್ದಗಳು ಸೇರಿದಾಗ ಧನ್ವಂತರಿ ಮಹಾಮಂತ್ರವು ನಿಷ್ಪನ್ನವಾಗುವುದು. ಈ ಮಂತ್ರವು ಸಂಸಾರಿಗರಾದ ಜನರನ್ನು ನಾನಾವಿಧ ವ್ಯಾಧಿಗಳ ಪೀಡೆಯಿಂದ ಬಿಡುಗಡೆಗೊಳಿಸಿ ಕೊನೆಗೆ ಸಂಸಾರದಿಂದಲೇ ಬಿಡುಗಡೆಗೊಳಿಸಬಲ್ಲುದು.

**ಚಂದ್ರೌಘಕಾಂತಿಮಮೃತೋರುಕರೈರ್ಜಗಂತಿ**
**ಸಂಜೀವಯಂತಮಮಿತಾತ್ಮ ಸುಖಂ ಪರೇಶಮ್ ।**
**ಜ್ಞಾನಂ ಸುಧಾಕಲಶಮೇವ ಚ ಸಂದಧಾನಂ**
**ಶೀತಾಂಶುಮಂಡಲಗತಂ ಸ್ಮರತಾಽತ್ಮ ಸಂಸ್ಥಮ್ ॥**

ಅನಂತಚಂದ್ರರ ಕಾಂತಿಯಿಂದ ಬೆಳಗುವ, ಅಮೃತಸ್ರಾವಿಗಳಾದ ತನ್ನ ದಿವ್ಯಕಿರಣಗಳಿಂದ ಜಗತ್ತಿಗೆ ಜೀವಕಳೆಯನ್ನು ತುಂಬುತ್ತಿರುವ, ಅಸೀಮಸುಖಸ್ವರೂಪನಾದ, ರಮಾಬ್ರಹ್ಮಾದಿಗಳಿಗೂ ಒಡೆಯನಾದ,

ಒಂದು ಕೈಯಲ್ಲಿ ಜ್ಞಾನಮುದ್ರೆಯನ್ನೂ ಇನ್ನೊಂದರಲ್ಲಿ ಅಮೃತಪೂರ್ಣವಾದ ಕಲಶವನ್ನೂ ಧರಿಸಿಕೊಂಡು ಚಂದ್ರಮಂಡಲದಲ್ಲಿ ಕುಳಿತಿರುವ ಧನ್ವಂತರಿಮೂರ್ತಿಯು ತನ್ನಲ್ಲಿ ನೆಲೆಸಿರುವಂತೆ ನೆನೆಯಿರಿ.

**ಮೂರ್ಧ್ನಿ ಸ್ಥಿತಾದಮುತ ಏವ ಸುಧಾಂ ಸ್ರವಂತೀಂ**
**ಭ್ರೂಮಧ್ಯಗಾಚ್ಚ ತತ ಏವ ಚ ತಾಲುಸಂಸ್ಥಾತ್ ।**
**ಹಾರ್ದಾಚ್ಚ ನಾಭಿಸದನಾದಧರಸ್ಥಿತಾಚ್ಚ**
**ಧ್ಯಾತ್ವಾಭಿಪೂರಿತತನುರ್ದುರಿತಂ ನಿಹನ್ಯಾತ್ ॥**

ತನ್ನ ಶಿರಸ್ಸಿನಲ್ಲಿ, ಹುಬ್ಬುಗಳ ನಡುವಿನಲ್ಲಿ, ಕಿರುನಾಲಿಗೆಯಲ್ಲಿ, ಹೃದಯದಲ್ಲಿ, ಹೊಕ್ಕುಳಿನಲ್ಲಿ ಮತ್ತು ಕೆಳಭಾಗದಲ್ಲಿ ಹೀಗೆ ಷಟ್ ಚಕ್ರಗಳಲ್ಲು ಸನ್ನಿಹಿತನಾದ ಧನ್ವಂತರಿಯಿಂದ ಸುರಿಯುತ್ತಿರುವ ಅಮೃತಧಾರೆಯನ್ನು ನೆನೆದು ಆ ಅಮೃತಧಾರೆಯಲ್ಲಿ ತನ್ನ ಶರೀರವೆಲ್ಲ ತೊಯ್ದು ಪವಿತ್ರವಾದಂತೆ ಅನುಸಂಧಾನ ಮಾಡಿ ಜಪಿಸುವವನು ಎಲ್ಲ ದುರಿತವನ್ನೂ ದೂರೀಕರಿಸಬಲ್ಲನು.

**ಅಜ್ಞಾನದುಃಖಭಯರೋಗಮಹಾವಿಷಾಣಿ**
**ಯೋಗೋಽಯಮಾಶು ವಿನಿಹಂತಿ ಸುಖಂ ಚ ದದ್ಯಾತ್ ।**
**ಉನ್ಮಾದವಿಭ್ರಮಹರಃ ಪರತಶ್ಚ ಸಾಂದ್ರ-**
**ಮಾನಂದಮೇವ ಪದಮಾಪಯತಿ ಸ್ಮ ನಿತ್ಯಮ್ ॥**

ಈ ಮಂತ್ರವು ಅಜ್ಞಾನ, ದುಃಖ, ಹೆದರಿಕೆ, ನಾನಾ ವಿಧದ ರೋಗಗಳು, ಮಾರಕಗಳಾದ ವಿಷಗಳು- ಇವನ್ನೆಲ್ಲ ಪರಿಹರಿಸಿ ಪರದಲ್ಲಿ ಪರಮಸುಖವನ್ನು ನಿತ್ಯವೂ ಜಾಪಕರಿಗೆ ಕರುಣಿಸುವುದು.

**ಧ್ಯಾತ್ವೈವ ಹಸ್ತತಲಗಂ ಸ್ವಮೃತಂ ಸ್ರವಂತಂ**
**ದೇವಂ ಸ ಯಸ್ಯ ಶಿರಸಿ ಸ್ವಕರಂ ನಿಧಾಯ ।**

**ಆವರ್ತಯೇನ್ಮನುಮಿಮಂ ಸ ಚ ವೀತರೋಗಃ**
**ಪಾಪಾದಪೈತಿ ಮನಸಾ ಯದಿ ಭಕ್ತಿನಮ್ರಃ ॥**

ಮಂತ್ರಜಾಪಕನು ತನ್ನ ಅಂಗೈಯಲ್ಲಿ ಸನ್ನಿಹಿತನಾಗಿ ಅಮೃತವನ್ನು ಸುರಿಸುತ್ತಿರುವ ಧನ್ವಂತರಿಯನ್ನು ಮನಸ್ಸಿನಲ್ಲಿ ನೆನೆದುಕೊಂಡು ಯಾವನಾದರೂ ಒಬ್ಬನ ತಲೆಯ ಮೇಲೆ ಆ ಕೈಯನ್ನಿಟ್ಟು ಈ ಮಹಾಮಂತ್ರವನ್ನು ಆವೃತ್ತಿಯಿಂದ ಪಠಿಸಿದರೆ ಆತನು ಪಾಪದಿಂದ ವಿಮುಕ್ತನಾಗಿ ನಿರೋಗಿಯಾಗುವನು, ಆತ ಭಗವದ್ಭಕ್ತನಾಗಿದ್ದು ಶ್ರದ್ಧೆಯಿಂದ ಕೂಡಿದ್ದರೆ.

**ಶತಂ ಸಹಸ್ರಮಯುತಂ ಲಕ್ಷಂ ವಾಽಽರೋಗಸಂಕ್ಷಯಾತ್ ।**
**ಇಮಮೇವ ಜಪೇನ್ಮಂತ್ರಂ ಸಾಧೂನಾಂ ದುಃಖಶಾಂತಯೇ ॥**

ಸಜ್ಜನರ ರೋಗಾದಿ ದುಃಖ ನಿವೃತ್ತಿಗಾಗಿ ಈ ಮಂತ್ರವನ್ನೆ ರೋಗದ ತಾರತಮ್ಯಕ್ಕನುಗುಣವಾಗಿ ನೂರು, ಸಾವಿರ, ಹತ್ತುಸಾವಿರ, ಒಂದು ಲಕ್ಷದ ವರೆಗೆ ಜಪಿಸಬೇಕು. ಇಷ್ಟೇ ಸಂಖ್ಯೆಯ ಜಪವೆಂದೇನೂ ನಿಯಮವಿಲ್ಲ. ರೋಗ ಪರಿಹಾರವಾಗುವ ತನಕ ಅದಕ್ಕನುಗುಣವಾಗಿ ಮಂತ್ರ ಜಪದ ಆವೃತ್ತಿಯನ್ನು ಹೆಚ್ಚಿಸಬೇಕು.

**ಜ್ವರದಾಹಾದಿಶಾಂತ್ಯರ್ಥಂ ತರ್ಪಯೇನ್ಮನುನಾಽಮುನಾ ।**
**ಧ್ಯಾತ್ವಾಹರಿಂ ಜಲೇ ಸಪ್ತರಾತ್ರಾಜ್ಜೂರ್ತಿರ್ವಿನಶ್ಯತಿ ॥**

ಜ್ವರದ ತಾಪ ಮೊದಲಾದುವನ್ನು ಪರಿಹರಿಸುವುದಕ್ಕಾಗಿ ಜಲದಲ್ಲಿ ಧ್ವನಂತರಿ ರೂಪಿಯಾದ ಹರಿಯನ್ನು ಧ್ಯಾನಿಸಿ ಏಳು ದಿನಗಳ ತನಕ ಈ ಮಂತ್ರದಿಂದ ತರ್ಪಣವಿತ್ತರೆ ರೋಗವು ಹೇಳಹೆಸರಿಲ್ಲದಂತಾಗುವುದು.

**ಅಯುತಾಮೃತಸಮಿದ್ಧೋಮಾದ್ಗೋಘೃತಕ್ಷೀರಸಂಯುತಾತ್ ।**
**ಸರ್ವರೋಗಾ ವಿನಶ್ಯಂತಿ ವಿಮುಖೋ ನ ಹರೇರ್ಯದಿ ॥**

ದನದ ತುಪ್ಪ - ಹಾಲುಗಳಿಂದ ಬೆರೆಸಿದ ಅಮೃತಬಳ್ಳಿಯ ಸಮಿತ್ತುಗಳಿಂದ ಹತ್ತು ಸಾವಿರ ಬಾರಿ ಈ ಮಂತ್ರದಿಂದಲೆ ಹೋಮಿಸಿದರೆ ರೋಗಿಯು ಭಗವದ್ವಿಮುಖನಾದ ಪಾಪಚೇತನನಲ್ಲದಿದ್ದರೆ - ಎಲ್ಲ ರೋಗಗಳೂ ನಾಶವಾಗುವವು.

**ಭೂತಾಭಿಚಾರಶಾಂತ್ಯರ್ಥಮಪಾಮಾರ್ಗಾಹುತಿಕ್ರಿಯಾ ।**
**ದ್ವಿಗುಣಾಽಮೃತಯಾ ಪಶ್ಚಾತ್ಕೇವಲೇನ ಘೃತೇನ ವಾ ॥**

ಭೂತ ಗ್ರಹಗಳ ಪೀಡೆ, ಮಾರಣ ಹೋಮ ಮೊದಲಾದ ಕ್ರೂರೋಪದ್ರವ ಶಾಂತಿಗಾಗಿ ಉತ್ತರಣೆಯ ಗಿಡದ ಸಮಿತ್ತುಗಳಿಂದ ಮೊದಲು ಹೋಮಿಸಿ ಅನಂತರ ಅಮೃತಬಳ್ಳಿಯ ಸಮಿತ್ತಿನಿಂದ ಅಥವಾ ಕೇವಲ ದನದ ತುಪ್ಪದಿಂದ ಅದರ ಎರಡರಷ್ಟು ಆಹುತಿಯನ್ನೀಯಬೇಕು.

**ಆಯುರ್ವಿವೃದ್ಧಯೇ ನಿತ್ಯಂ ಜನ್ಮನಕ್ಷತ್ರ ಏವ ವಾ ।**
**ಚತುಶ್ಚತುರ್ಭಿರ್ದೂರ್ವಾಭಿಃ ಕ್ಷೀರಾಜ್ಯಾಕ್ತಾಭಿರಿಷ್ಯತೇ ॥**

ಆಯುರ್ವೃದ್ಧಿಗಾಗಿ, ದನದ ಹಾಲು ತುಪ್ಪಗಳಿಂದ ತೋಯ್ದ ಕದರಿನ ನಾಲ್ಕು ನಾಲ್ಕೇ ಕುಡಿಗಳಿಂದ ಇದೇ ಮಂತ್ರದಿಂದ ದಿನವೂ ಅಥವಾ ಜನ್ಮ ನಕ್ಷತ್ರದ ದಿನದಂದು ಹೋಮಿಸಬೇಕು.

**(ಯೋಗದೀಪಿಕಾ ಗುರುಕುಲದ 'ಧನ್ವಂತರಿ' ವಿಶೇಷ ಸಂಚಿಕೆಯಿಂದ)**

---

**ತೇ ನರಾಃ ಪಶವೋ ಲೋಕೇ ಕಿಂ ತೇಷಾಂ ಜೀವನೇ ಫಲಮ್ ।**
**ಯೈರ್ನ ಲಬ್ಧಾ ಹರೇರ್ದೀಕ್ಷಾ ನಾರ್ಚಿತೋ ವಾ ಜನಾರ್ದನಃ ॥**

**(ಕೃ.ಮ.೩)**

ಯಾರು ವೈಷ್ಣವದೀಕ್ಷೆಯನ್ನು ಹೊಂದಿಲ್ಲ ಅಥವಾ ಜನಾರ್ದನನ ಅರ್ಚನೆ ಮಾಡಿಲ್ಲ, ಅಂತಹ ಮನುಷ್ಯರು ಪಶುಗಳು. ಅವರ ಜೀವನದಿಂದ ಏನು ಪ್ರಯೋಜನ?

# ಅಷ್ಟಾಕ್ಷರ ಧನ್ವಂತರಿಮಂತ್ರ ಜಪಕ್ರಮಃ

-ವಿದ್ವಾನ್ ರಾಮನಾಥಾಚಾರ್ಯ

ಓಂ ಧಂ ಧನ್ವಂತರಯೇ ನಮಃ ಓಂ ಎಂಬ ಮಂತ್ರವನ್ನು ಮೂರು (ಒಂಭತ್ತು) ಬಾರಿ ಮನಸ್ಸಿನಲ್ಲಿ ಹೇಳುತ್ತಾ ಪ್ರಾಣಾಯಾಮ ಮಾಡಬೇಕು.

**ಅಸ್ಯ ಶ್ರೀ ಧನ್ವಂತರಿಮಂತ್ರಸ್ಯ ಬ್ರಹ್ಮಾ ಋಷಿಃ**
**ಅನುಷ್ಟುಪ್ ಛಂದಃ**
**ಧನ್ವಂತರಿರ್ದೇವತಾ ॥**

ಎಂಬುದಾಗಿ ಹೇಳುತ್ತಾ ತಲೆ, ಬಾಯಿ, ಎದೆಯನ್ನು ಕ್ರಮವಾಗಿ ಮುಟ್ಟಬೇಕು.

**ಪೂರ್ಣಜ್ಞಾನಾತ್ಮನೇ ಹೃದಯಾಯ ನಮಃ ।**
**ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ ।**
**ಪೂರ್ಣಪ್ರಭಾತ್ಮನೇ ಶಿಖಾಯೈ ವಷಟ್ ।**
**ಪೂರ್ಣಾನಂದಾತ್ಮನೇ ಕವಚಾಯ ಹುಮ್ ।**
**ಪೂರ್ಣ ತೇಜ ಆತ್ಮನೇ ನೇತ್ರಾಭ್ಯಾಂ ಔಷಟ್ ।**
**ಪೂರ್ಣಶಕ್ತ್ಯಾತ್ಮನೇ ಅಸ್ತ್ರಾಯ ಫಟ್ ॥**

**ಚಂದ್ರೌಘಕಾಂತಿಮಮೃತೋರುಕರೈರ್ಜಗಂತಿ**
**ಸಂಜೀವಯಂತಮಮಿತಾತ್ಮ ಸುಖಂ ಪರೇಶಮ್ ।**

**ಜ್ಞಾನಂ ಸುಧಾಕಲಶಮೇವ ಚ ಸಂದಧಾನಂ**
**ಶೀತಾಂಶುಮಂಡಲಗತಂ ಸ್ಮರತಾಽತ್ಮ ಸಂಸ್ಥಮ್ ॥**

ಹೀಗೆ ಧನ್ವಂತರಿಯನ್ನು ಧ್ಯಾನಿಸಬೇಕು.

ಶ್ರೀ ಮಧ್ವಾಂತರ್ಗತ ಧನ್ವಂತರಿಪ್ರೇರಣಯಾ ಶ್ರೀಮಧ್ವಾಂತರ್ಗತ ಧನ್ವಂತರಿಪ್ರೀತ್ಯರ್ಥಂ ಅಷ್ಟಾಕ್ಷರ ಧನ್ವಂತರಿಮಂತ್ರಜಪತರ್ಪಣಮಹಂ ಕರಿಷ್ಯೇ ॥

ಓಂ ಧಂ ಧನ್ವಂತರಯೇ ನಮಃ ಓಂ ಧನ್ವಂತರಿಂ ತರ್ಪಯಾಮಿ ಎಂದು ಹೇಳಿ ಹತ್ತಕ್ಕೊಂದರಂತೆ ತರ್ಪಣ ನೀಡಬೇಕು.

ಮತ್ತೊಮ್ಮೆ ಧ್ಯಾನಾಂಗನ್ಯಾಸಾದಿಗಳನ್ನು ನಡೆಸಿ ಕೃಷ್ಣಾರ್ಪಣ ಬಿಡಬೇಕು.

ಅನೇನ ಅಷ್ಟಾಕ್ಷರ ಧನ್ವಂತರಿಮಂತ್ರಜಪತರ್ಪಣಕರಣೇನ ಮಧ್ವಾಂತರ್ಗತಧನ್ವಂತರಿಃ ಪ್ರೀಯತಾಮ್ ॥

('ಧನ್ವಂತರಿ' ಸ್ಮರಣ ಸಂಚಿಕೆಯಿಂದ)

---

**ಪ್ರಮಾಣಂ ನೈವ ಜೀವಾನಾಮುತ್ತರಕ್ಷಣ ಜೀವನೇ ।**
**ಚರಮಶ್ವಾಸವೇಲಾಯಾಂ ಯತ್ ಕಾರ್ಯಂ ತತ್ಸದಾ ಕುರು ॥**

ಜೀವರಿಗೆ ಉತ್ತರಕ್ಷಣದ ಜೀವನದಲ್ಲಿ ಭರವಸೆಯಿಲ್ಲ. ಆದ್ದರಿಂದ ಕೊನೆಯ ಉಸುರಿನ ಸಮಯದಲ್ಲಿ ಮಾಡಬೇಕಾದ ಕರ್ತವ್ಯ (ಹರಿಸ್ಮರಣೆ) ವನ್ನು ಯಾವಾಗಲೂ ಮಾಡುತ್ತಿರು.

# ವ್ಯಾಧಿಯ ತಾಪವನ್ನು ತಪಸ್ಸೆಂದು ಭಾವಿಸಬೇಕು

-ವಿದ್ವಾನ್ ಸಗ್ರಿ ರಾಘವೇಂದ್ರಾಚಾರ್ಯ

ಸಾಮಾನ್ಯವಾಗಿ ವ್ಯಾಧಿಯ ತಾಪಕ್ಕೊಳಗಾದ ವ್ಯಕ್ತಿ ನರಳಾಡುವುದುಂಟು. ''ಯಾಕಪ್ಪ ದೇವರು ಈ ಶಿಕ್ಷೆಯನ್ನು ಕೊಟ್ಟ?'' ಎಂದು ದೇವರನ್ನೇ ಆಕ್ಷೇಪಿಸುವುದುಂಟು, ಶಪಿಸುವುದುಂಟು.

ಆದರೆ ಬೃಹದಾರಣ್ಯಕೋಪನಿಷತ್ತು (7-13-1) ಎಚ್ಚರಿಸುತ್ತದೆ-

**''ಏತದ್ ವೈ ಪರಮಂ ತಪೋ ಯದ್ ವ್ಯಾಧಿತಸ್ತಪ್ಯತೇ...''**

ರೋಗದ ತಾಪಕ್ಕೊಳಗಾಗುವುದು ಶ್ರೀ ವಿಷ್ಣುವಿನ ಪ್ರೀತಿಗಾಗಿ ನಡೆಸುವ ತಪಸ್ಸೆಂದು ಭಾವಿಸಬೇಕು. ಪೂರ್ವ ಜನ್ಮದ ಪಾಪ ಕರ್ಮ ಪರಿಪಾಕಾವಸ್ಥೆಗೊಳಗಾಗಿ ರೋಗದ ರೂಪದಲ್ಲಿ ಕಾಣಿಸಿಕೊಳ್ಳಬೇಕೆಂದರೆ ಅದು ಕರ್ಮವನ್ನು ಪರಿಪಾಕಾವಸ್ಥೆಗೊಳಿಸುವ ಕರ್ಮಾಧ್ಯಕ್ಷನ ಚಮತ್ಕಾರ ತಾನೆ?

ಹೀಗೆ ವ್ಯಾಧಿಯ ಅನುಭವದಲ್ಲಿ ಕರ್ಮಾಧ್ಯಕ್ಷನಾದ ನರಸಿಂಹನ ಪಾತ್ರವನ್ನು ಗುರುತಿಸಿ, ಅದರ ಆಧಾರದಲ್ಲಿ ಅವನ ಪ್ರೀತಿಗಾಗಿ ತಪಸ್ಸು ಅಂದರೆ ಚಿಂತನೆ ನಡೆಸಿದಲ್ಲಿ ಅಂತಹ ವ್ಯಕ್ತಿ ಮೋಕ್ಷ ಪುರುಷಾರ್ಥವನ್ನೂ ಹೊಂದುವನೆಂದು ಉಪನಿಷತ್ತು ನಿರೂಪಿಸಿದೆ- '...ಪರಮಂ ಹ್ಯೇವ ಲೋಕಂ ಜಯತಿ ಯ ಏವಂ ವೇದ

ತನ್ನ ಶವ ಯಾತ್ರೆ, ಶವದಾಹ ಮುಂತಾದುವನ್ನು ಹೇಗೋ ಹಾಗೆಯೇ ತನ್ನ ವ್ಯಾಧಿಗಳನ್ನು ಶ್ರೀ ವಿಷ್ಣುವಿಗಾಗಿ ಇರುವ 'ತಪಸ್ಸು' ಎಂದು

ಭಾವಿಸುವವನು ಪರಮಾತ್ಮನನ್ನು ಹೊಂದುವನೆಂದು ಶ್ರೀಮದಾಚಾರ್ಯರು ಪ್ರಮಾಣದ ಸಂವಾದವನ್ನು ನೀಡಿರುವರು-

**'ವ್ಯಾಧೀನ್ ಶವಹೃತಿಂ ಚೈವ ಶವದಾಹಾದಿಕಂ ತಥಾ ।**
**ವಿಷ್ಣವೇ ತಪ ಇತ್ಯೇವ ಚಿಂತಯನ್ ಯಾತಿ ತತ್ ಪರಮ್ ॥''**

ಶ್ರೀಮದಾಚಾರ್ಯರು ಅಲ್ಲೇ ಉದಾಹರಿಸಿರುವ 'ಬ್ರಹ್ಮತರ್ಕ' ಈ ನಿಟ್ಟಿನಲ್ಲಿ ಇನ್ನಷ್ಟು ಅನುಸಂಧಾನ ಸೌಲಭ್ಯವನ್ನು ತೋರಿಸಿಕೊಟ್ಟಿದೆ. ಮರಣಾವಸ್ಥೆಗೊಳಗಾದಾಗ, ರೋಗದ ಕ್ಲೇಶಾವಸ್ಥೆಗೊಳಗಾದಾಗ ಅದನ್ನು ಭಗವಂತನಿಗೆ ಸಮರ್ಪಿಸಲು ಬೇಕಾದ ಅವಧಾನ ಇರಲಾರದು. ಅದಕ್ಕಾಗಿ ಕ್ಲೇಶ ದುಃಖಾದಿಗಳಿಗೆ ಒಳಗಾಗದೆ ನೆಮ್ಮದಿಯ ಸ್ಥಿತಿಯಲ್ಲಿರುವಾಗ ಹಿಂದೆ ಅನುಭವಿಸಿದ ರೋಗಗಳ ತಾಪವನ್ನೂ ಮುಂದೆ ಅನುಭವಿಸಲಿರುವ ರೋಗ, ಮರಣಗಳ ತಾಪವನ್ನೂ ಶ್ರೀವಿಷ್ಣುವಿನ ಪ್ರೀತ್ಯರ್ಥವಾದ ತಪಸ್ಸೆಂದು ಸಮರ್ಪಿಸಬೇಕು-

**ಅಕ್ಲೇಶಿತೋಽಪಿ ಕ್ಲೇಶಾದೀನತೀತೈಷ್ಯಾನಪೀಹ ಯಃ ।**
**ವಿಷ್ಣವೇ ತಪ ಇತ್ಯೇವ ಪ್ರಾಪಯೇತ್ ಸ ಪರಂ ವ್ರಜೇತ್ ॥**

('ಧನ್ವಂತರಿ' ಸ್ಮರಣ ಸಂಚಿಕೆಯಿಂದ)

---

ಕೃಷ್ಣಸ್ಯ ಯೋ ಬಾಲಭಾವಃ ಸ ಮೇ ಕಾಮಾನ್ ಪ್ರಯಚ್ಛತು ।
ಅಂಧಕಾರತಮೋ ಘೋರಂ ಪುರುಷಂ ಕೃಷ್ಣಪಿಂಗಲಮ್ ।
ಪಶ್ಯಾಮಿ ಭಯಸಂತ್ರಸ್ತಃ ಪಾಶಹಸ್ತಮಿವಾಂತಕಮ್ ।
ತತೋಽಹಂ ಪುಂಡರೀಕಾಕ್ಷಮಚ್ಯುತಂ ಶರಣಂ ಗತಃ ॥

ಧನ್ಯೋಽಹಂ ನಿರ್ಭಯೋ ನಿತ್ಯಂ ಯಸ್ಯ ಮೇ ಭಗವಾನ್ ಹರಿಃ ।
ಧ್ಯಾತ್ವಾ ನಾರಾಯಣಂ ದೇವಂ ಸರ್ವೋಪದ್ರವನಾಶನಮ್ ।

# ನಾಮತ್ರಯಮಂತ್ರಃ

-ವಿದ್ವಾನ್ ರಾಮನಾಥಾಚಾರ್ಯ

**ಓಂ ಅಚ್ಯುತಾನಂತಗೋವಿಂದಾಯ ನಮಃ ಓಂ**

ಈ ಮಂತ್ರದಿಂದ ಪ್ರಾಣಾಯಾಮ ಮಾಡಿ ಋಷ್ಯಾದಿನ್ಯಾಸ ಮಾಡಬೇಕು.

**ಕಾಶ್ಯಪಾತ್ರಿಭಾರದ್ವಾಜಾ ಋಷಯಃ ।**
**ವಿರಾಟ್ ಛಂದಃ ।**
**ಅಚ್ಯುತಾನಂತಗೋವಿಂದೋ ದೇವತಾ ॥**

ಷಡಂಗನ್ಯಾಸ ಮಾಡಬೇಕು.

**ಪೂರ್ಣಜ್ಞಾನಾತ್ಮನೇ ಹೃದಯಾಯ ನಮಃ ।**
**ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ ।**
**ಪೂರ್ಣಪ್ರಭಾತ್ಮನೇ ಶಿಖಾಯೈ ವಷಟ್ ।**
**ಪೂರ್ಣಾನಂದಾತ್ಮನೇ ಕವಚಾಯ ಹುಮ್ ।**
**ಪೂರ್ಣತೇಜ ಆತ್ಮನೇ ನೇತ್ರಾಭ್ಯಾಂ ಔಷಟ್ ।**
**ಪೂರ್ಣಶಕ್ತ್ಯಾತ್ಮನೇ ಅಸ್ತ್ರಾಯ ಫಟ್ ॥**

ಈ ಪ್ರಕಾರ ಧ್ಯಾನ ಮಾಡಬೇಕು.

**ಶಂಖಚಕ್ರಧರಂ ದೇವಂ ಚತುರ್ಬಾಹುಂ ಕಿರೀಟಿನಮ್ ।**
**ಸರ್ವಾಯುಧೈರುಪೇತಂ ತಂ ಗರುಡೋಪರಿ ಸಂಸ್ಥಿತಮ್ ॥**

**ಸನಕಾದಿಮುನೀಂದ್ರೈಶ್ಚ ಸರ್ವದೇವೈರುಪಾಸಿತಮ್ ।**
**ಪ್ರಾತರುದ್ಯತ್ಸಹಸ್ರಾಂಶುಮಂಡಲೋಪಮಕುಂಡಲಮ್ ॥**

**ಸರ್ವಲೋಕಸ್ಯ ರಕ್ಷಾರ್ಥಮನಂತಂ ನಿತ್ಯಮೇವ ಹಿ ।**
**ಅಭಯಂ ವರದಂ ದೇವಂ ಪ್ರಯಚ್ಛಂತಂ ಮುದಾಽನ್ವಿತಮ್ ॥**

**(ಏವಂ ಧ್ಯಾತ್ವಾ ಜಪೇನ್ಮಂತ್ರಂ ನಾಮತ್ರಯಮಿದಂ ಶುಭಮ್ ।)**

**ಮಧ್ವಾಂತರ್ಗತ ಅಚ್ಯುತಾನಂತ ಗೋವಿಂದ ಪ್ರೇರಣಯಾ ಮಧ್ವಾಂತರ್ಗತ ಅಚ್ಯುತಾನಂತ ಗೋವಿಂದ ಪ್ರೀತ್ಯರ್ಥಂ ನಾಮತ್ರಯಜಪಮಹಂ ಕರಿಷ್ಯೇ ॥**

ಹನ್ನೊಂದು ಅಕ್ಷರದ ನಾಮತ್ರಯ ಮಂತ್ರವನ್ನು ಜಪಿಸಿ ಹತ್ತಕ್ಕೊಂದರಂತೆ ತರ್ಪಣ ನೀಡಬೇಕು.

**ಓಂ ಅಚ್ಯುತಾನಂತಗೋವಿಂದಂ ತರ್ಪಯಾಮಿ ॥**

ಮತ್ತೆ ಧ್ಯಾನ ಅಂಗನ್ಯಾಸಾದಿಗಳನ್ನು ಮಾಡಿ ಕೃಷ್ಣಾರ್ಪಣ ಬಿಡಬೇಕು.

**ಅನೇನ ನಾಮತ್ರಯಜಪಕರಣೇನ ಮಧ್ವಾಂತರ್ಗತಃ**
**ಅಚ್ಯುತಾನಂತಗೋವಿಂದಃ ಪ್ರೀಯತಾಮ್ ॥**

('ಧನ್ವಂತರಿ' ಸ್ಮರಣ ಸಂಚಿಕೆಯಿಂದ)

---

**ಅಚ್ಯುತಾನಂತಗೋವಿಂದ ನಾಮೋಚ್ಚಾರಣಭೇಷಜಾತ್ ।**
**ನಶ್ಯಂತಿ ಸಕಲಾರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್ ॥**

# ಧನ್ವಂತರಿ ಹೋಮ

-ವಿದ್ವಾನ್ ಹೆಚ್. ಸತ್ಯನಾರಾಯಣಾಚಾರ್ಯ

ಸಮುದ್ರ ಮಥನದಿಂದ ವಿಷವೂ ಲಭಿಸಿತು. ಅಮೃತವೂ ದೊರೆಯಿತು. ಎರಡೂ ಮರ್ತ್ಯರಿಗೆ ಸಿಗಬೇಕೆಂಬ ಭಾವದಿಂದ ದೇವತೆಗಳು ವಿಷವನ್ನು ಬೇವಿನ ಮರದಲ್ಲಿ ಇಟ್ಟರು. ಅಮೃತವನ್ನು ಗುಲೂಚೀವಲ್ಲಿಯಲ್ಲಿಟ್ಟರು. ಸಿಹಿಯಾದ ಸಸ್ಯದಲ್ಲಿ ಅಮೃತವಿಟ್ಟಲ್ಲಿ ಅವು ಪಶುಗಳಿಗೆ ಆಹಾರವಾಗಿ ಮಾನವನಿಗೆ ದೊರೆಯದಾದೀತೆಂದು ಕಟುಕಹಿಯೆನಿಸಿದ ಈ ಗುಲೂಚೀಬಳ್ಳಿ ಅಮೃತಮಯವಾಯಿತು. ಅಮೃತಬಳ್ಳಿಯೆನಿಸಿತು. ಆಯುರ್ವೇದದಲ್ಲಿ ಪರಮೌಷಧಿ ಲತೆಯೆನಿಸಿತು.

ಈ ಅಮೃತಬಳ್ಳಿಯನ್ನು ಧನ್ವಂತರಿ ಮಂತ್ರದಿಂದ ಆಹುತಿ ನೀಡುವ ಯಾಜ್ಞಿಕ ವಿಧಿಯೇ ಧನ್ವಂತರಿ ಹೋಮ. ಎಪ್ಪತ್ತಕ್ಕೂ ಹೆಚ್ಚು ಮಂತ್ರಗಳನ್ನು ಹೇಳಿದ ಆಚಾರ್ಯ ಮಧ್ವರು ಕೊನೆಯದಾಗಿ ಧನ್ವಂತರಿ ಮಂತ್ರವನ್ನು ಹೇಳುತ್ತಾ ಒಂದು ಮಾತು ಆಡಿದ್ದಾರೆ.

**ಧಾನ್ವಂತರೋ ಮಹಾಮಂತ್ರಃ ಸಂಸೃತಿ ವ್ಯಾಧಿ ನಾಶನಃ ।**

**ಅತ್ರೋಕ್ತ ಸರ್ವಮಂತ್ರಾಣಾಂ ನಾಯಕೋಪಲಸನ್ನಿಭಃ ॥**

ಈ ಧನ್ವಂತರಿ ಮಹಾಮಂತ್ರವು ರೋಗನಾಶಕ, ಮೋಕ್ಷಪ್ರದ. ಇಲ್ಲಿ ನಿರೂಪಿಸಿದ ಎಲ್ಲಾ ಮಂತ್ರಗಳಿಗೂ ಮಿಗಿಲೆನಿಸಿದ ಶ್ರೇಷ್ಠ ಮಂತ್ರ. ಹಾರದಲ್ಲಿ ಮಧ್ಯದ ನಾಯಕ ಮಣಿ (ಹವಳ ಮಣಿ) ಯಂತೆ 72 ಮಂತ್ರಗಳ ಈ ಮಂತ್ರಹಾರದಲ್ಲಿ ನಾಯಕಮಣಿಯಿದು.

ಧನ್ವಂತರಿ ಮಂತ್ರದಿಂದ ಆಯುಷ್ಯಹೋಮ ಮಾಡಬಹುದು. ಅಭಿಚಾರಶಾಂತಿಹೋಮವನ್ನೂ ಮಾಡಬಹುದು. ರೋಗ ನಿವೃತ್ತಿಗಾಗಿ ಧನ್ವಂತರಿ ಹೋಮವಂತೂ ಪ್ರಸಿದ್ಧವೇ ಇದೆ. ಆದರೆ ಉದ್ದೇಶ

ಬದಲಾದಂತೆ ದ್ರವ್ಯವೂ ಬದಲಾಗುತ್ತವೆ.

**ಅಯುತಾಮೃತ ಸಮಿದ್ಹೋಮಾತ್ ಗೋಘೃತಕ್ಷೀರ ಸಂಯುತಾತ್ ।**
**ಸರ್ವೇ ರೋಗಾ ವಿನಶ್ಯಂತಿ ವಿಮುಖೋ ನ ಹರೇರ್ಯದಿ ॥**

(ತಂತ್ರಸಾರ ಸಂಗ್ರಹ ೪।೧೯)

ಗೋ ಘೃತ ಹಾಗು ಗೋ ಕ್ಷೀರದಿಂದ ಆರ್ದ್ರವಾದ ಅಮೃತಬಳ್ಳಿಯಿಂದ 10,000 ಬಾರಿ ಧನ್ವಂತರಿ ಮಂತ್ರದಿಂದ ಆಹುತಿಯನ್ನು ಕೊಡಬೇಕು. ಹರಿಯಲ್ಲಿ ಭಕ್ತಿಯಿಂದ ಶ್ರದ್ಧಾಪೂರ್ವಕವಾಗಿ ಈ ಅಮೃತವಲ್ಲಿ ಹೋಮವನ್ನು ಮಾಡಿದಲ್ಲಿ ಸರ್ವರೋಗವೂ ನಿವೃತ್ತಿಯಾಗುತ್ತದೆ. ಅಮೃತಬಳ್ಳಿ ನಾಲ್ಕು ಅಂಗುಲದಷ್ಟು ಉದ್ದವಿರಬೇಕು.

'**ಅಮೃತಾಃ ಸಮಿಧೋ ಜ್ಞೇಯಾಃ ಸರ್ವತ್ರ ಚತುರಂಗುಲಾಃ** (ತಂತ್ರಸಾರ 2/25) ಎಂಬ ಆಚಾರ್ಯರ ಮಾತು ಇದಕ್ಕೆ ಪ್ರಮಾಣ. ಎಲ್ಲಾ ಸಮಿಧೆಗಳೂ ಪ್ರಾದೇಶ ಮಾತ್ರ (ಗೇಣುದ್ದ)ವಿರಬೇಕೆಂದು ಅಂದರೆ 8 ರಿಂದ 12 ಅಂಗುಲ ಇರಬೇಕೆಂಬ ಪ್ರಮಾಣವಿದ್ದರೂ ಅಮೃತಬಳ್ಳಿ ಮಾತ್ರ ಅಷ್ಟು ಉದ್ದವಿರಬಾರದು. ಮುಷ್ಟಿಯಲ್ಲಿ ಹಿಡಿಯಲು ಅನುಗುಣವಾಗುವಷ್ಟೆ ಉದ್ದವಿರಬೇಕು. ಇದನ್ನು ಕ್ಷೀರಾಜ್ಯಗಳಲ್ಲಿ ಮುಳುಗಿಸಿ ಒದ್ದೆಯಾದ ಸಮಿತ್ತನ್ನು ಭಕ್ತಿಯಿಂದ ಮಂತ್ರವನ್ನು ಉಚ್ಚರಿಸಿ ಸ್ವಾಹಾಕಾರವನ್ನು ಹೇಳುತ್ತಾ ಹೋಮಿಸಬೇಕು. ಧನ್ವಂತರಿರೂಪಿ ಪರಮಾತ್ಮನ ಇದಂ ನ ಮಮ ಎಂದು ತ್ಯಾಗ ಮಾಡಬೇಕು. ಭೂತಶಾಂತಿ ಹಾಗೂ ಅಭಿಚಾರ ಶಾಂತಿಗಾಗಿಯೂ ಧನ್ವಂತರಿ ಹೋಮ ವಿಹಿತವಾಗಿದೆ.

**ಭೂತಾಭಿಚಾರ ಶಾಂತ್ಯರ್ಥಂ ಅಪಾಮಾರ್ಗಾಹುತಿ ಕ್ರಿಯಾ ।**
**ದ್ವಿಗುಣಾಮೃತಯಾ ಪಶ್ಚಾತ್ ಕೇವಲೇನ ಘೃತೇನ ವಾ ॥**

ಭೂತ ಮೊದಲಾದ ದುಷ್ಟಗ್ರಹಗಳು ಶರೀರದಲ್ಲಿ ಆವೇಶಗೊಂಡಾಗ ಅದನ್ನು ಓಡಿಸುವುದಕ್ಕಾಗಿ **ಅಪಾಮಾರ್ಗ** ಸಮಿತ್ತಿನಿಂದ

(ಉತ್ತರಣೆ ಕಡ್ಡಿಯಿಂದ) ಹೋಮಿಸಬೇಕು. ದ್ವೇಷಾಸೂಯೆಗಳಿಂದ ಪರರು ಮಾಡುವ ಮಾರಣ-ಸ್ತಂಭನಾದಿಗಳಿಗೆ ಅಭಿಚಾರವೆಂದು ಹೆಸರು. ಅಭಿಚಾರದೋಷದ ಶಾಂತಿಗಾಗಿಯೂ ಈ **ಅಪಾಮಾರ್ಗಾಹುತಿ** ಕ್ರಿಯೆಯು ವಿಹಿತವಾಗಿದೆ. ಆದರೆ ಈ ಭೂತಾಭಿಚಾರ ಶಾಂತಿಯು ಯಾಜ್ಞಿಕ ವಿಧಿಯಲ್ಲಿ 'ಘೋರಕರ್ಮ'ವೆನಿಸಿಕೊಳ್ಳುತ್ತದೆ. ಆದ್ದರಿಂದ **ಅಪಾಮಾರ್ಗಾಹುತಿ** ಕೊಟ್ಟಮೇಲೆ ತನ್ನ ರಕ್ಷೆಗಾಗಿ ಮತ್ತು ಪುಷ್ಟಿಗಾಗಿ ಎರಡುಪಟ್ಟು ಕ್ಷೀರಾಜ್ಯಯುಕ್ತ ಅಮೃತವಲ್ಲಿಯಿಂದ ಅಥವಾ ಕೇವಲ ಘೃತದಿಂದ ಧನ್ವಂತರಿಗೆ ಆಹುತಿ ನೀಡಬೇಕು. ಅಪಾಮಾರ್ಗದಿಂದ 108 ಆಹುತಿಯನ್ನಿತ್ತರೆ ಅಮೃತವಲ್ಲಿಯಿಂದ 216 ಆಹುತಿ 1000 ಆಹುತಿಯಿತ್ತರೆ ಅಮೃತವಲ್ಲಿಯಿಂದ 2000 ಆಹುತಿ ನೀಡಬೇಕು.

ಗರಿಕೆಯಿಂದ ಹೋಮಿಸಿದಾಗ ಧನ್ವಂತರಿ ಹೋಮವೇ ಆಯುಷ್ಯ ಹೋಮವಾಗುತ್ತದೆ. ಆಯುಷ್ಯ ವೃದ್ಧಿಗಾಗಿ ಈ ದೂರ್ವಾಹೋಮವನ್ನು ನಿತ್ಯವೂ ಮಾಡಬಹುದು. ವಾರ್ಷಿಕವಾಗಿ ತನ್ನ ಜನ್ಮನಕ್ಷತ್ರದ ದಿನವಾದರೂ ಈ ದೂರ್ವಾಯುಷ್ಯ ಹೋಮವನ್ನು ಮಾಡುವುದು ಉಚಿತ. ಒಂದು ಆಹುತಿಗೆ 4 ಗರಿಕೆ, ಹಾಲು, ತುಪ್ಪಗಳಲ್ಲಿ ಅದ್ದಿದ 4-4 ಗರಿಕೆ ತುದಿಗಳನ್ನು ಧನ್ವಂತರಿ ಮಂತ್ರದಿಂದ ಹೋಮಿಸಬೇಕು.

**ಆಯುರ್ವಿವೃದ್ಧಯೇ ನಿತ್ಯಂ ಜನ್ಮನಕ್ಷತ್ರ ಏವ ವಾ ।**
**ಚತುಶ್ಚತುರ್ಭಿರ್ದೂರ್ವಾಭಿಃ ಕ್ಷೀರಾಜ್ಯಾಕ್ತಾಭಿರಿಷ್ಯತೇ ॥**

(ತಂತ್ರಸಾರ ೪/೧೦೧)

ಆಹುತಿಯೊಂದಕ್ಕೆ ನಾಲ್ಕು ಸಂಖ್ಯೆಯ ಕ್ಷೀರಾಜ್ಯಾಕ್ತವಾದ ದೂರ್ವೆಯನ್ನು ಇಲ್ಲಿ ಆಚಾರ್ಯರು ಹೇಳಿದ್ದಾರೆ. '**ದಧಿಮಧ್ವಾಜ್ಯಸಂಯುಕ್ತೈಶ್ಚತುರ್ದೂರ್ವಾಂಕುರೈಃ ಶುಭೈಃ** ಎಂಬ ವಚನಾಂತರದಂತೆ ದಧಿ-ಮಧು-ಆಜ್ಯಗಳನ್ನು ಒಟ್ಟುಸೇರಿಸಿದ ತ್ರಿಮಧುರದಲ್ಲಿ ಅದ್ದಿ ನಾಲ್ಕು ದೂರ್ವೆಗಳನ್ನು ಹೋಮಿಸುವ ಕ್ರಮ ಹೆಚ್ಚು ಚಾಲ್ತಿಯಲ್ಲಿವೆ. ಒಟ್ಟಿನಲ್ಲಿ ಅಮೃತವಲ್ಲಿಯಾದರೆ ಒಂದು

ಆಹುತಿಗೆ ನಾಲ್ಕು ಅಂಗುಲವಿರಬೇಕು. ಗರಿಕೆಯಾದರೆ ನಾಲ್ಕು ಸಂಖ್ಯೆಯ ತುದಿ ಗರಿಕೆಯಿರಬೇಕು.

ಋಗ್ವೇದದಲ್ಲಿ **'ಅಯಂ ಮೇ ಹಸ್ತ'** ಎಂಬ ಅನುಷ್ಟುಪ್ ಛಂದಸ್ಸಿನ ಮಂತ್ರವು ಧಾನ್ವಂತರ ಋಙ್ಮಂತ್ರವೆನಿಸಿದೆ. ಈ ಮಂತ್ರದಿಂದ ತುಪ್ಪವನ್ನು ಹೋಮಿಸುವುದೂ ರೋಗನಾಶಕ ಹಾಗೂ ಆಯುರ್ವರ್ಧಕ. ಹೀಗೆ ಧನ್ವಂತರಿ ಹೋಮಕ್ಕೆ ನಾಲ್ಕು ದ್ರವ್ಯಗಳು. ಅಮೃತವಲ್ಲಿ, ಉತ್ತರಾಣಿ ಕಡ್ಡಿ, ಗರಿಕೆ ಹಾಗೂ ಆಜ್ಯ. ದ್ರವ್ಯ ವ್ಯತ್ಯಾಸದಿಂದ ಧನ್ವಂತರಿ ಹೋಮವೂ ನಾಲ್ಕು ಬಗೆ. ರೋಗ ನಿವೃತ್ತಿಗಾಗಿ ಅಮೃತವಲ್ಲಿ ಹೋಮ. ಅಭಿಚಾರ ಶಾಂತಿಗಾಗಿ ಅಪಾಮಾರ್ಗಹೋಮ. ಆಯುಷ್ಯ ವೃದ್ಧಿಗಾಗಿ ದೂರ್ವಾಹೋಮ ಹಾಗೂ ಋಙ್ಮಂತ್ರದಿಂದ ಆಜ್ಯಹೋಮ. ಒಂದು ಹೋಮತಂತ್ರದಲ್ಲಿ ಈ ನಾಲ್ಕೂ ದ್ರವ್ಯಗಳಿಂದ ಹೋಮಿಸುವ ಸಮಾನ ತಂತ್ರವಿಧಿಯೂ ಇದೆ. ಆದರೆ ಅಪಾಮಾರ್ಗದಿಂದ ಹೋಮಿಸಿದ ತರುವಾಯ ಎರಡು ಪಟ್ಟು ಸಂಖ್ಯೆಯ ಗುಲೂಚೀ (ಅಮೃತವಲ್ಲಿ) ಹೋಮ ಅಥವಾ ಆಜ್ಯ ಹೋಮವನ್ನು ಮಾಡುವುದು ಅವಶ್ಯಕ.

ಈ ಎಲ್ಲಾ ಯಜ್ಞಕರ್ಮಾನುಷ್ಠಾನಗಳು ಫಲಕಾರಿಯಾಗಬೇಕಾದರೆ ಮುಖ್ಯ ಬೇಕಾದುದು ಹರಿಭಕ್ತಿ. **'ಯದಿ ಭಕ್ತಿ ನಮ್ರಃ' 'ವಿಮುಖೋ ನ ಹರೇರ್ಯದಿ'** ಎಂಬ ಆಚಾರ್ಯರ ಮಾತುಗಳಿಗೆ ಹೆಚ್ಚು ಒತ್ತಿದೆ. ಆದ್ದರಿಂದ ಆಚಾರ್ಯರು ಕೊನೆಗೆ ಹೇಳುವ ಮಾತಿದು.

**ಸರ್ವಕ್ರಿಯಾಃ ಹರೌ ಭಕ್ತೇ ಹರಿಭಕ್ತೈಃ ಸ್ವನುಷ್ಠಿತಾಃ ।**
**ಗುರುಭಕ್ತೈಃ ಸದಾಚಾರೈಃ ಫಲಂತ್ಯದ್ಧಾ ನ ಚಾನ್ಯಥಾ ॥**

ಯಜ್ಞ ಮಾಡಿಸುವ ಯಜಮಾನ ಹರಿಭಕ್ತನಾಗಿರಬೇಕು. ಮಾಡುವವರು ಹರಿಗುರುಭಕ್ತರಾಗಿದ್ದು ಸದಾಚಾರಿಗಳಾಗಿ ಸರಿಯಾಗಿ ಅನುಷ್ಠಾನ ಮಾಡಿದರೆ ನಿಶ್ಚಿತವಾಗಿಯೂ ಫಲದೊರೆಯುವುದು. ವಿಪರೀತವಾದರೆ ವಿಪರೀತ.

('ಮುಖ್ಯಪ್ರಾಣ' ಪತ್ರಿಕೆಯಿಂದ)

# ಗರುಡ ಪುರಾಣದ ಸರ್ವವ್ಯಾಧಿಹರ ವೈಷ್ಣವಕವಚ

-ವಿದ್ವಾನ್ ಸಗ್ರಿ ರಾಘವೇಂದ್ರಾಚಾರ್ಯ

ಗರುಡ ಪುರಾಣದ ಆಚಾರ ಕಾಂಡದಲ್ಲಿ ಪ್ರಸ್ತಾಪಿಸಲ್ಪಟ್ಟಿರುವಂತೆ ಅನೇಕ ರೋಗಗಳ ಬಗ್ಗೆ, ಅವುಗಳ ಚಿಕಿತ್ಸೆಯ ಬಗ್ಗೆ ಸುಶ್ರುತನಿಗೆ ಉಪದೇಶ ನೀಡಿದ 'ಧನ್ವಂತರಿ' ಸರ್ವರೋಗ ನಿವಾರಕವಾಗಿ ವೈಷ್ಣವ ಕವಚವನ್ನು ಉಪದೇಶಿಸುವನು. (194-1...18)

**'ಸರ್ವವ್ಯಾಧಿಹರಂ ವಕ್ಷ್ಯೇ ವೈಷ್ಣವಂ ಕವಚಂ ಶುಭಮ್ ।**
**ಯೇನ ರಕ್ಷಾ ಕೃತಾ ಶಂಭೋ ದೈತ್ಯಾನ್ ಕ್ಷಪಯತಃ ಪುರಾ ॥**

ಹಿಂದೆ ಹಿಂಸೆಯಲ್ಲಿ ತೊಡಗಿದ ರಾಕ್ಷಸರ ವಿರುದ್ಧವಾಗಿ ಸಂರಕ್ಷಣೆ ನೀಡಿದ್ದ 'ವೈಷ್ಣವ ಕವಚ'ವನ್ನು ಉಪದೇಶಿಸುವೆನು. ಅದು ಎಲ್ಲ ಬಗೆಯ ವ್ಯಾಧಿಗಳನ್ನೂ ಪರಿಹರಿಸಬಲ್ಲದೆಂದು 'ಪ್ರತಿಜ್ಞೆ' ಮಾಡಿದ ಧನ್ವಂತರಿ ಪ್ರಾರಂಭದ ಎರಡು ಪದ್ಯಗಳಲ್ಲಿ ವೈಷ್ಣವ ಕವಚದ ಧಾರಣೆಯ ಅನುಸಂಧಾನಕ್ಕೆ ಪುಷ್ಟಿ ನೀಡುವಂತಹ ಸಂಕಲ್ಪವನ್ನು ಪ್ರಸ್ತುತ ಪಡಿಸುವನು-

**ಪ್ರಣಮ್ಯ ದೇವಮೀಶಾನಮಜಂ ನಿತ್ಯಮನಾಮಯಮ್ ।**
**ದೇವಂ ಸರ್ವೇಶ್ವರಂ ವಿಷ್ಣುಂ ಸರ್ವವ್ಯಾಪಿನಮವ್ಯಯಮ್ ।**
**ಬಧ್ನಾಮ್ಯಹಂ ಪ್ರತಿಸರಂ ನಮಸ್ಕೃತ್ಯ ಜನಾರ್ದನಮ್ ।**
**ಅಮೋಘಪ್ರತಿಮಂ ಸರ್ವಂ ಸರ್ವದುಃಖನಿವಾರಣಮ್ ॥**

ಸರ್ವೇಶ್ವರನಾದ, ರೋಗದೂರನಾದ ಶ್ರೀ ವಿಷ್ಣುವನ್ನು ನಮಸ್ಕರಿಸಿ,

ಎಲ್ಲ ಬಗೆಯ ದುಃಖ ದುಮ್ಮಾನಗಳನ್ನು ಪರಿಹರಿಸಬಲ್ಲ ಈ ಕವಚವನ್ನು ತೊಟ್ಟುಕೊಳ್ಳುವೆನು.

ನಲ್ವತ್ತಕ್ಕಿಂತಲೂ ಹೆಚ್ಚು ಭಗವದ್ರೂಪಗಳ ಉಲ್ಲೇಖವನ್ನೊಳಗೊಂಡಿದ್ದು ಹದಿನೆಂಟು ಪದ್ಯಗಳ ವ್ಯಾಪ್ತಿಯಲ್ಲಿ ಪ್ರಸ್ತುತವಾಗಿರುವ ವೈಷ್ಣವ ಕವಚದಲ್ಲಿ ಕೃಷ್ಣ, ರಾಮ ಮುಂತಾದ ಭಗವಂತನ ಪ್ರಸಿದ್ಧ ರೂಪಗಳನ್ನೂ, ಸುದರ್ಶನ ಚಕ್ರ, ಕೌಮೋದಕೀ ಗದೆ, ವನಮಾಲಾ ಮುಂತಾದ ಅವನ ಆಯುಧ ಆಭರಣ ರೂಪದಲ್ಲಿರುವ ಅವನ ರೂಪಗಳನ್ನೂ, ಶೇಷ, ಬಲರಾಮ ಮುಂತಾದವರಲ್ಲಿ ಆಯಾ ಹೆಸರಿನಿಂದ ಆವೇಶಗೊಂಡ ರೂಪಗಳನ್ನೂ ಉಲ್ಲೇಖಿಸಿ, ದೇಹದ ಅಂಗಾಂಗಗಳ ವಿಷಯದಲ್ಲಿ, ಬೇರೆ ಬೇರೆ ಸ್ಥಳಗಳಲ್ಲಿಯ ರಕ್ಷಣೆಯ ವಿಷಯದಲ್ಲಿ, ಅನಿಷ್ಟಗಳ ಪರಿಹಾರದ ವಿಷಯದಲ್ಲಿ ಹಾಗೂ ಇಷ್ಟಗಳ ಈಡೇರಿಸುವ ವಿಷಯದಲ್ಲಿ ರಕ್ಷಣೆಯನ್ನು ಪ್ರಾರ್ಥಿಸಲಾಗಿದೆ-

**ವಿಷ್ಣುರ್ಮಾಮಗ್ರತಃ ಪಾತು ಕೃಷ್ಣೋ ರಕ್ಷತು ಪೃಷ್ಠತಃ ।**
**ಹರಿರ್ಮೇ ರಕ್ಷತು ಶಿರೋ ಹೃದಯಂ ಚ ಜನಾರ್ದನಃ ॥**

**ಮನೋ ಮಮ ಹೃಷೀಕೇಶೋ ಜಿಹ್ವಾಂ ರಕ್ಷತು ಕೇಶವಃ ।**
**ಪಾತು ನೇತ್ರೇ ವಾಸುದೇವಃ ಶ್ರೋತ್ರೇ ಸಂಕರ್ಷಣೋ ವಿಭುಃ ॥**

**ಪ್ರದ್ಯುಮ್ನಃ ಪಾತು ಮೇ ಘ್ರಾಣಮನಿರುದ್ಧಸ್ತು ಚರ್ಮ ಚ ।**
**ವನಮಾಲಾ ಗಲಸ್ಯಾಂತಂ ಶ್ರೀವತ್ಸೋ ರಕ್ಷತಾದಧಃ ॥**

**ಪಾರ್ಶ್ವಂ ರಕ್ಷತು ಮೇ ಚಕ್ರಂ ವಾಮಂ ದೈತ್ಯನಿವಾರಣಮ್ ।**
**ದಕ್ಷಿಣಂ ತು ಗದಾದೇವೀ ಸರ್ವಾಸುರ ನಿವಾರಿಣೀ ॥**

**ಉದರಂ ಮುಸಲಂ ಪಾತು ಪೃಷ್ಠಂ ಮೇ ಪಾತು ಲಾಂಗಲಮ್ ।**
**ಊರ್ಧ್ವಂ ರಕ್ಷತು ಮೇ ಶಾರ್ಙ್ಗಂ ಜಂಘೇ ರಕ್ಷತು ನಂದಕಃ ॥**

ಪಾರ್ಷ್ಣೀ ರಕ್ಷತು ಶಂಖಶ್ಚ ಪದ್ಮಂ ಮೇ ಚರಣಾವುಭೌ ।
ಸರ್ವಕಾರ್ಯಾರ್ಥಸಿದ್ಧ್ಯರ್ಥಂ ಪಾತು ಮಾಂ ಗರುಡಃ ಸದಾ ॥

ವರಾಹೋ ರಕ್ಷತು ಜಲೇ ವಿಷಮೇಷು ಚ ವಾಮನಃ ।
ಅಟವ್ಯಾಂ ನರಸಿಂಹಶ್ಚ ಸರ್ವತಃ ಪಾತು ಕೇಶವಃ ॥

ಹಿರಣ್ಯಗರ್ಭೋ ಭಗವಾನ್ ಹಿರಣ್ಯಂ ಮೇ ಪ್ರಯಚ್ಛತು ।
ಸಾಂಖ್ಯಾಚಾರ್ಯಸ್ತು ಕಪಿಲೋ ಧಾತುಸಾಮ್ಯಂ ಕರೋತು ಮೇ ॥

ಶ್ವೇತದ್ವೀಪನಿವಾಸೀ ಚ ಶ್ವೇತದ್ವೀಪಂ ನಯತ್ವಜಃ ।
ಸರ್ವಾನ್ ಸೂದಯತಾಂ ಶತ್ರೂನ್ ಮಧುಕೈಟಭಮರ್ದನಃ ॥

ಸದಾ ಕರ್ಷತು ವಿಷ್ಣುಶ್ಚ ಕಿಲ್ಬಿಷಂ ಮಮ ವಿಗ್ರಹಾತ್ ।
ಹಂಸೋ ಮತ್ಸ್ಯಸ್ತಥಾ ಕೂರ್ಮಃ ಪಾತು ಮಾಂ ಸರ್ವತೋ ದಿಶಮ್

ತ್ರಿವಿಕ್ರಮಸ್ತು ಮೇ ದೇವಃ ಸರ್ವಪಾಪಾನಿ ಕೃಂತತು ।
ತಥಾ ನಾರಾಯಣೋ ದೇವೋ ಬುದ್ಧಿಂ ಪಾಲಯತಾಂ ಮಮ ॥

ಶೇಷೋ ಮೇ ನಿರ್ಮಲಂ ಜ್ಞಾನಂ ಕರೋತ್ವಜ್ಞಾನನಾಶನಮ್ ।
ವಡವಾಮುಖೋ ನಾಶಯತಾಂ ಕಲ್ಮಷಂ ಯತ್ಕೃತಂ ಮಯಾ ॥

ಪದ್ಭ್ಯಾಂ ದದಾತು ಪರಮಂ ಸುಖಂ ಮೂರ್ಧ್ನಿ ಮಮ ಪ್ರಭುಃ ।
ದತ್ತಾತ್ರೇಯಃ ಪ್ರಕುರುತಾಂ ಸಪುತ್ರಪಶುಬಾಂಧವಮ್ ॥

ಸರ್ವಾನರೀನ್ ನಾಶಯತು ರಾಮಃ ಪರಶುನಾ ಮಮ ।
ರಕ್ಷೋಘ್ನಸ್ತು ದಾಶರಥಿಃ ಪಾತು ನಿತ್ಯಂ ಮಹಾಭುಜಃ ॥

ಶತ್ರೂನ್ ಹಲೇನ ಮೇ ಹನ್ಯಾದ್ರಾಮೋ ಯಾದವನಂದನಃ ।
ಪ್ರಲಂಬಕೇಶಿಚಾಣೂರಪೂತನಾಕಂಸನಾಶನಃ ॥

**ವೈಷ್ಣವಂ ಕವಚಂ ಬದ್ಧ್ವಾ ವಿಚರಾಮಿ ಮಹೀತಲೇ |**
**ಅಪ್ರಧೃಷ್ಯೋಽಸ್ಮಿ ಭೂತಾನಾಂ ಸರ್ವದೇವಮಯೋ ಹ್ಯಹಮ್ |**
**ಸ್ಮರಣಾದ್ದೇವದೇವಸ್ಯ ವಿಷ್ಣೋರಮಿತ ತೇಜಸಃ ||**

ಈ ಕವಚ ಸ್ತೋತ್ರವನ್ನು ಆರೋಗ್ಯ ಸಿದ್ಧಿಗಾಗಿ ಪಠಿಸುವಾಗ ಇದರ ಎರಡು ಮೂರು ಮಾತುಗಳಿಗೆ ವಿಶೇಷವಾಗಿ ಗಮನ ನೀಡಬೇಕು. **'ಪೂರ್ವಜನ್ಮ ಕೃತಂ ಪಾಪಂ ವ್ಯಾಧಿರೂಪೇಣ ಜಾಯತೇ'** ಎಂಬುದಾಗಿ ಹಿಂದಿನ ಜನ್ಮಗಳಲ್ಲಿ ಎಸಗಿರುವ ಪಾಪಗಳ ಪರಿಪಾಕ ರೂಪದಲ್ಲಿ ಬೇರೆ ಬೇರೆ ರೋಗಗಳಿಗೆ ಬಲಿಯಾಗುವುದರಿಂದ, ರೋಗಗಳಿಗೆ ಮೂಲ ಕಾರಣವಾದ ಅಂತಹ ಪಾಪವನ್ನು ಕರ್ಮಾಧ್ಯಕ್ಷನಾದ ಭಗವಂತನು ಪರಿಹರಿಸಲಿ ಎಂಬ ಪ್ರಾರ್ಥನೆಯನ್ನೊಳಗೊಂಡ **'ಸದಾ ಕರ್ಷತು ವಿಷ್ಣುಶ್ಚ ಕಿಲ್ಬಿಷಂ ಮಮ ವಿಗ್ರಹಾತ್' 'ವಡವಾಮುಖೋ ನಾಶಯತಾಂ ಕಲ್ಮಷಂ ಯತ್ಕೃತಂ ಮಯಾ'** - ಎಂಬ ಮಾತುಗಳನ್ನು ಗಮನಿಸಬೇಕು. ಹಾಗೆಯೇ ಆಯುರ್ವೇದ ಶಾಸ್ತ್ರ ಹೇಳಿದಂತೆ ಹೆಚ್ಚಿನ ರೋಗಗಳೆಲ್ಲ ವಾತ ಪಿತ್ತ ಹಾಗೂ ಕಫ ಈ ಧಾತುಗಳ ಪರಿಮಾಣದಲ್ಲಿಯ ಏರುಪೇರಿನಿಂದ ಸಂಭವಿಸುವವು. ಇಂತಹ ಸ್ಥಿತಿಯನ್ನು ದೂರ ಮಾಡಿ ಧಾತುಗಳಲ್ಲಿ ಸಮತೋಲನವನ್ನು ವ್ಯವಸ್ಥೆಗೊಳಿಸುವಂತೆ ಕಪಿಲ ವಾಸುದೇವನಲ್ಲಿ ಸಲ್ಲಿಸಲಾಗುವ ಈ ಪ್ರಾರ್ಥನೆಯೂ ಗಮನಾರ್ಹ. **'ಸಾಂಖ್ಯಾಚಾರ್ಯಸ್ತು ಕಪಿಲೋ ಧಾತುಸಾಮ್ಯಂ ಕರೋತು ಮೇ'.**

ಈ ಕವಚ ಸ್ತೋತ್ರದಲ್ಲಿ 'ವಡವಾಮುಖ' ಎಂಬುದಾಗಿ ಭಗವಂತನ ವಿಶಿಷ್ಟ ರೂಪದ ಉಲ್ಲೇಖ ಬಂದಿದೆ. 'ವಡವಾ' ಎಂದರೆ ಹೆಣ್ಣು ಕುದುರೆ ಎಂದರ್ಥ. ಹೆಣ್ಣು ಕುದುರೆಯ ಮುಖವುಳ್ಳ ಭಗವದ್ರೂಪವು 'ವಡವಾಮುಖ' ಎನಿಸಿದೆ. ಗಾಯತ್ರೀ ಪ್ರತಿಪಾದ್ಯವಾಗಿ ಭಗವಂತನ ಒಂದು ಹೆಣ್ಣು ಕುದುರೆಯ ರೂಪ ಇದೆ ಎಂದು 'ಸತ್ತತ್ವ' (ಛಾ.ಉ.ಭಾ. 3-2-1) ಪರಿಚಯಿಸಿ ಕೊಟ್ಟಿದೆ. 'ತೃತೀಯೋ ವಾಚಿ ಸಂಸೃಷ್ಟ ಸ್ತ್ರೀರೂಪೋ

ಹಯಶೀರ್ಷಕಃ' ಈ ರೂಪವನ್ನೇ ಇಲ್ಲಿ ಉಲ್ಲೇಖಿಸಿದ್ದೇ ಹೊರತು ಪ್ರಸಿದ್ಧವಾದ 'ಹಯಗ್ರೀವ' ರೂಪ ಅಲ್ಲ.

'ನೇಹ ನಾನಾಸ್ತಿ ಕಿಂಚನ' ಎಂಬ ಕಾಠಕೋಪನಿಷತ್ತು ಭಗವಂತನಲ್ಲಿ ಅವನ ಸ್ವರೂಪಾತ್ಮಕವಾದದ್ದು ಬಿಟ್ಟು ಸ್ವರೂಪಕ್ಕಿಂತ ಭಿನ್ನವಾದ ಯಾವುದೇ ಗುಣ ಧರ್ಮಗಳಿಲ್ಲ ಎಂದು ಸಾರುತ್ತಿದೆ.

**'ಯೈಷಾ ಚೇಷ್ಟಾ ಭಗವತೇ ಯಚ್ಚ ಜ್ಞಾನಂ ಪರಾತ್ಮನಃ ।**
**ತತ್ ಸರ್ವಂ ಭಗವಾನೇವ ಯೇ ಚ ಧರ್ಮಾ ಬಲಾದಯಃ ॥'**

ಎಂಬ ಪ್ರಮಾಣ (ಅಥ. ಉ. ಭಾ. 1-3-10) ಭಗವಂತನ ಚಟುವಟಿಕೆ, ಜ್ಞಾನ ಮುಂತಾದ ಗುಣ ಧರ್ಮಗಳೆಲ್ಲ ಅವನ ಸ್ವರೂಪಾತ್ಮಕವಾದವುಗಳೇ ಎಂದು ಸಾರುತ್ತಿದೆ.

ಇದಕ್ಕನುಗುಣವಾಗಿ ಭಗವಂತನ ವನಮಾಲೆ, ಕೌಸ್ತುಭ ಮುಂತಾದ ಆಭರಣಗಳೂ, ಚಕ್ರ, ಗದೆ ಮುಂತಾದ ಆಯುಧಗಳೂ ಅವನ ರೂಪಗಳಾಗಿ ಉಲ್ಲೇಖಿಸಲ್ಪಟ್ಟಿರುವ ಈ ಕವಚ ಸ್ತೋತ್ರದಲ್ಲಿ ಅವನ ಬಾಲ್ಯಾವಸ್ಥೆಯನ್ನೂ ಅವನ ಸ್ವರೂಪಾತ್ಮಕವಾದುದೆಂದೇ ಪರಿಗಣಿಸಿ, ಅದರಲ್ಲಿ ಇಷ್ಟೆಗಳ ಪೂರಣೆಗಾಗಿ ಪ್ರಾರ್ಥಿಸಿಕೊಳ್ಳಲಾಗಿದೆ - **''ಕೃಷ್ಣಸ್ಯ ಯೋ ಬಾಲಭಾವಃ ಸ ಮೇ ಕಾಮಾನ್ ಪ್ರಯಚ್ಛತು''.**

('ಧನ್ವಂತರಿ' ಸಂಚಿಕೆಯಿಂದ)

---

**ಹರಣ ಹಿಂಗದ ಮುನ್ನ ಹರಿಯ ಸೇವೆಯ ಮಾಡಿ**
**ಪರಗತಿಗೆ ಸಾಧನವ ಮಾಡಿಕೊಳ್ಳೋ**
**ಕರುಣನಿಧಿ ''ಕಾಗಿನೆಲೆಯಾದಿ ಕೇಶವನ**
**ನಿರುತದಲಿ ನೆನೆನೆನೆದು ಸುಖಿಯಾಗೋ ಮರುಳೇ ॥**

# ವಾಯುದೇವ ಮತ್ತು ಆರೋಗ್ಯ

-ವಿದ್ವಾನ್ ಸಗ್ರಿ ರಾಘವೇಂದ್ರಾಚಾರ್ಯ

ವಾಯುದೇವನು 'ವಾಯು' ಎಂದು ಶಾಸ್ತ್ರದಲ್ಲಿ ಪ್ರಸಿದ್ಧನಾಗಿರುವುದಕ್ಕೆ ಒಂದು ಕಾರಣ- ಅವನು ಬಲದೇವತೆ ಹಾಗೂ ಎಲ್ಲರಿಗೂ ಆಯುಷ್ಯವನ್ನು ನೀಡುವವನು.

ಮನುಷ್ಯರಿಗಷ್ಟೇ ಅಲ್ಲದೆ, ದೇವತೆಗಳಿಗೂ, ಅನ್ನದೇವ ಎನಿಸಿರುವ ಚತುರ್ಮುಖನಿಗೂ ಆಯುಷ್ಯವನ್ನು ನೀಡುವವನು ವಾಯುದೇವನೇ.

**'ಆಯುರೂಪೋಽಖಿಲಾನಾಂ ಚ ದೇವಾನಾಂ ವಾಯುರೇವ ಹಿ।**
**ಅನ್ನದೇವಸ್ಯ ಚಾಯುಃ ಸಃ......' ಐ.ಉ.ಭಾ. (೨-೩-೩-೬)**

ಆಯುಷ್ಯ ಪ್ರದಾನದಲ್ಲಿ ಎರಡು ಅಂಶಗಳು ಘಟಕಗಳಾಗಿವೆ. ದೇಹಧಾರಣೆಗೆ ಬೇಕಾದ ಅನ್ನ ಉಣ್ಣುವಂತೆ ಮಾಡುವುದು ಒಂದು ಅಂಶವಾದರೆ, ಅಂತಹ ದೇಹ ರೋಗಗ್ರಸ್ತವಾಗದೆ ಇರುವಂತೆ ಮಾಡುವುದು ಮತ್ತೊಂದು ಅಂಶ. ಈ ಎರಡೂ ಅಂಶಗಳನ್ನು ಪೂರೈಸುವುದರ ಮೂಲಕ ಆಯುಷ್ಯವನ್ನು ನೀಡುವವನು ವಾಯುದೇವ ''.....ತತ್ಪ್ರಸಾದಾತ್ ಪರೇಽಶ್ನಂತಿ....'' ಎಂದಿರುವಂತೆ ವಾಯುದೇವನ ಅನುಗ್ರಹದಿಂದಲೇ ಅನ್ನವನ್ನು ಉಂಡು ಅನುಭವಿಸುವವರು.

**ರೋಗ ಪರಿಹಾರ**

ಹೀಗೆ ಅನ್ನವನ್ನು ಉಣ್ಣಿಸುವ ಮೂಲಕ ಆಯುಷ್ಯವನ್ನು ಅನುಗ್ರಹಿಸುವ ವಾಯುದೇವ ದೇಹಕ್ಕೆ ಬರುವ ರೋಗಗಳನ್ನು ಪರಿಹರಿಸುವ ಮೂಲಕವೂ ಆಯುಷ್ಯವನ್ನು ಸಂರಕ್ಷಿಸುವನು.

'ವಾಯುಪ್ರಿಯ'ನಾದ, 'ವಾಯುವಾಹನ'ನಾದ ಭಗವಂತನನ್ನು

'ರುದ್ರವರ್ತನಿ' ಎಂದು ಹೆಸರಿಸುತ್ತಿರುವ ಋಗ್ವೇದ (3-3) ಆ ಹೆಸರಿನ ಘಟಕವಾಗಿ ವಾಯುದೇವನನ್ನು 'ರುದ್ರ' ಎಂದು ಕರೆದಿರುವುದು ಅವನು ಭವರೋಗವನ್ನೂ, ದೈಹಿಕರೋಗಗಳನ್ನೂ ಓಡಿಸುವನೆಂಬ ಅಭಿಪ್ರಾಯದಲ್ಲಿಯೇ 'ರುಜಾಂ ದ್ರವಣತೋ ರುದ್ರೋ ವಾಯುಃ...'

ಇದರ ಆಧಾರದಲ್ಲಿಯೇ ಶ್ರೀ ತ್ರಿವಿಕ್ರಮಪಂಡಿತರು ವಾಯುಸ್ತುತಿಯಲ್ಲಿ 'ಜನ್ಮಾಧಿವ್ಯಾಧ್ಯುಪಾಧಿಪ್ರತಿಹತಿವಿರಹಪ್ರಾಪಕಾಣಾಂ...' ಎಂಬುದಾಗಿ ರೋಗಗಳ ಕಾರಣಗಳನ್ನು ದೂರ ಮಾಡುವವನೆಂದು ವಾಯುದೇವರನ್ನು ಸ್ತುತಿಸಿದ್ದಾರೆ.

'ಮಾತರ್ಮೇ ಮಾತರಿಶ್ವನ್....' ಎಂಬ ಪದ್ಯದಲ್ಲಿ '...ಜರಯಿತಃ ಜನ್ಮಮೃತ್ಯಾಮಯಾನಾಮ್' - ಜನನ ಮರಣ ಹಾಗೂ ರೋಗಗಳನ್ನು ಪರಿಹರಿಸುವವನೇ ಎಂದು ಸಂಬೋಧಿಸಲಾಗಿದೆ.

## ದೇಹದಲ್ಲಿ ಪಾತ್ರ

ಜೀವನ ಪಾಂಚಭೌತಿಕ ದೇಹಗಳಲ್ಲಿ ವಾಯುದೇವನ ಪಾತ್ರವನ್ನು ವಿವೇಚಿಸಿಕೊಂಡಲ್ಲಿ, ಅಂತಹ ದೇಹಗಳಲ್ಲಿಯ ರೋಗಗಳ ನಿವಾರಣೆಯಲ್ಲಿ ಅವನ ಪಾತ್ರ ಮತ್ತಷ್ಟು ಸ್ಪಷ್ಟವಾಗಬಲ್ಲದು. ದೇಹ ಧಾರಣೆಗೆ ಮುಖ್ಯವಾಗಿ ಸಂಬಂಧಿಸುವವು ಮೂರು ಚಟುವಟಿಕೆಗಳು - ಉಸಿರಾಟ, ಆಹಾರ ಸೇವನೆ ಹಾಗೂ ಮಲ ಮೂತ್ರ ವಿಸರ್ಜನೆ. ದೇಹಕ್ಕೆ ತಗಲುವ ರೋಗಗಳೂ ಈ ಮೂರು ಚಟುವಟಿಕೆಗಳಲ್ಲಿ ಯಾವುದಾದರೊಂದರ ಅವ್ಯವಸ್ಥೆಯಿಂದಾಗಿಯೇ ಕಾಣಿಸಿಕೊಳ್ಳುವುವು.

ಷಟ್ ಪ್ರಶ್ನೋಪನಿಷತ್ತು (3-1-6...11) ತಿಳಿಸುವಂತೆ ವಾಯುದೇವನೇ ತನ್ನ ಪ್ರಾಣಾದಿ ಐದು ರೂಪಗಳಿಂದ ದೇಹದ ಉಸಿರಾಟ ಮುಂತಾದುವನ್ನು ಮುಖ್ಯವಾಗಿ ನಿಯಂತ್ರಿಸುವವನೆಂದ ಮೇಲೆ, ಅಂತಹ ಚಟುವಟಿಕೆಗಳು ಸುಸೂತ್ರವಾಗಿ ಜರುಗಿ ಅವುಗಳ ಅವ್ಯವಸ್ಥೆಯಿಂದಾಗಿ ಕಾಣಿಸಿಕೊಳ್ಳಬಹುದಾದ ರೋಗಗಳ ಪರಿಹಾರದಲ್ಲಿ ಅವನ ಪಾತ್ರ ಸ್ಪಷ್ಟ.

ಶರೀರದಲ್ಲಿ ರೋಗಗಳು ಕಾಣಿಸಿಕೊಳ್ಳಲು ಶರೀರದ ಉಸಿರಾಟ ಮುಂತಾದ ಕ್ರಿಯೆಗಳಲ್ಲಿಯ ಅವ್ಯವಸ್ಥೆ ಒಂದು ಕಾರಣವಾದರೆ, ಅಂತಹ ಅವ್ಯವಸ್ಥೆ ಕಾಣಿಸಿಕೊಳ್ಳುವುದಕ್ಕೂ ಪ್ರಯೋಜಕವಾದ ಆಯಾ ವ್ಯಕ್ತಿಯ ಪೂರ್ವ ಜನ್ಮದ ಪಾಪ ಮತ್ತೊಂದು ಪ್ರಮುಖ ಕಾರಣ. ಪಾಪ ಪರಿಹಾರದ ಮೂಲಕ ಪಾವಿತ್ರ್ಯಕ್ಕೆ ಕಾರಣನಾಗಿದ್ದು 'ಪವಮಾನ' 'ಪವನ' ಎಂದೆಲ್ಲ ಪ್ರಸಿದ್ಧ ನಾಗಿರುವ ವಾಯುದೇವ ರೋಗಗಳಿಗೆ ಮೂಲವೆನಿಸುವ ಪಾಪಗಳನ್ನೂ ಪರಿಹರಿಸಿ ಆ ಮೂಲಕವೂ ರೋಗಗಳ ಪರಿಹಾರಕ್ಕೆ ಕಾರಣವಾಗಬಲ್ಲನು.

## ಉಪಾಸನೆಗನುಗುಣವಾದ ಫಲ

**'ತಂ ಯಥಾ ಯಥಾ ಉಪಾಸತೇ ತದೇವ ಭವತಿ'** ಯಾವ ಗುಣದ ಉಲ್ಲೇಖದೊಂದಿಗೆ ಉಪಾಸನೆ ನಡೆಸಲಾಗುವುದೋ ಅಂತಹ ಉಪಾಸನೆ ಗನುಗುಣವಾಗಿ ಆಯಾ ಗುಣ ಆ ಉಪಾಸಕನಿಗೆ ದೊರಕುವುದು. ಮುಖ್ಯ ವಾಗಿ ಭಗವಂತನ ಉಪಾಸನೆಗೆ ಸಂಬಂಧಿಸಿ ಹೊರಟಿರುವ ಈ ನಿಯಮ ಭಗವದ್ ಭಕ್ತರ ಉಪಾಸನೆಗೂ ಅನ್ವಯಿಸುವಂತಹದು. ಆದ್ದರಿಂದ ವಾಯುದೇವನಿಂದಲೂ ಆರೋಗ್ಯ, ಭಾಗ್ಯವನ್ನು ಪಡೆದುಕೊಳ್ಳಬೇಕೆಂ-ದರೆ ಅವನ ಆರೋಗ್ಯ ಭಾಗ್ಯ ಸಂಪನ್ನತೆಯನ್ನು ವಿವೇಚಿಸಿಕೊಳ್ಳಬೇಕು.

**'ಆಖಣಾಶ್ಮಸಮ'** ವ್ಯಕ್ತಿತ್ವದ ವಾಯುದೇವನನ್ನು ಕಲಿಯೇ ಮುಂತಾದ ಅಸುರರೇ ಆಕ್ರಮಿಸುವುದಕ್ಕೆ ಅಸಮರ್ಥರಾಗಿರುವಾಗ ರೋಗಗಳಾದರೂ ಹೇಗೆ ಆಕ್ರಮಿಸಿಯಾವು? ಆದ್ದರಿಂದ ವಾಯುದೇವ 'ಅನಾಮಯ' ಎನಿಸಿರುವ ಭಗವಂತನ ಪ್ರತಿಬಿಂಬನಾಗಿದ್ದು 'ಅನಾಮಯ' - 'ನೀರೋಗಿ' ಎನಿಸಿರುವವನು. ಕಾಲಕೂಟ ವಿಷವನ್ನು ಕುಡಿದು ಅರಗಿಸಿಕೊಂಡವನು ತಾನೇ ಅವನು! ಬರೇ ಮೂಲರೂಪದಲ್ಲಷ್ಟೇ ಅಲ್ಲ; ಆಂಜನೇಯ, ಭೀಮಸೇನ ಹಾಗೂ ಮಧ್ವ ಎಂಬ ಅವನ ಅವತಾರ ರೂಪಗಳಲ್ಲಿಯೂ ವಾಯುದೇವರು ಆರೋಗ್ಯ ಭಾಗ್ಯ ಸಂಪನ್ನರು.

ವಾಯುದೇವನ ಮೊದಲ ಅವತಾರ ಆಂಜನೇಯ ವಜ್ರಾಯುಧದ ಹೊಡೆತ, ಸಿಂಹಿಕೆಯ ಸೆಳೆತ, ರಾಕ್ಷಸರ ಆಕ್ರಮಣ, ಅಗ್ನಿಯ ಸ್ಪರ್ಶ - ಮುಂತಾದ ಅನೇಕ ಬಾಹ್ಯ ಆಘಾತಗಳಿಗೆ ತುತ್ತಾಗಿದ್ದರೂ, ಅವನ ದೇಹ ಯಾವುದೇ ವಿಕಾರಕ್ಕೆ ಒಳಗಾಗಿಲ್ಲ ಎಂದ ಮೇಲೆ ಅಂತಹ ದೇಹ ಯಾವ ರೋಗಕ್ಕೆ ಹೇಗೆ ತಾನೇ ಬಲಿಯಾದೀತು?

**'ಬುದ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಮರೋಗತಾ ।**
**ಅಜಾಡ್ಯಂ ವಾಕ್ಪಟುತ್ವಂ ಚ ಹನೂಮತ್ ಸ್ಮರಣಾದ್ ಭವೇತ್॥'**

ಎಂಬುದಾಗಿ ಹನೂಮಂತನ ಸ್ಮರಣೆಯಿಂದ ಸಿದ್ದಿಸುವುದೆಂದು ನಿರೂಪಿಸಲಾದ ಎಂಟು ಗುಣಗಳಲ್ಲಿ ಆರೋಗ್ಯವೂ ಒಂದು. ಈ ಗುಣಗಳ ಸಿದ್ಧಿಗಾಗಿ ಹೇಳಲಾದ ಹನೂಮಂತನ ಸ್ಮರಣೆ ಎಂದರೆ ಬುದ್ಧಿಯೇ ಮುಂತಾದ ಗುಣ ಸಂಪನ್ನನಾದ ಹನೂಮಂತನ ಸ್ಮರಣೆ ಹೊರತು ಹನೂಮಂತನ ನಾಮ ಮಾತ್ರದ ಸ್ಮರಣೆ ಅಲ್ಲ. ಆದುದರಿಂದ ಆರೋಗ್ಯದ ಸಿದ್ಧಿಗಾಗಿ ಹನೂಮಂತನನ್ನು ಆರೋಗ್ಯಭಾಗ್ಯ ಸಂಪನನ್ನಾಗಿಯೇ ಸ್ಮರಿಸಬೇಕು.

ವಾಯುದೇವನ ಎರಡನೇ ಅವತಾರ ಭೀಮಸೇನಾವತಾರ. ಶೈಶವದಲ್ಲೇ ಶತಶೃಂಗ ಪರ್ವತದಲ್ಲಿ ಪತನ, ಬಾಲ್ಯದಲ್ಲಿ ದುರ್ಯೋಧನ ನೀಡಿದ ವಿಷದ ಪಾನ, ಪ್ರಮಾಣ ಕೋಟಿಯಲ್ಲಿ ಹಾವುಗಳ ಕಡಿತ, ಬಕಾಸುರನಿಗಾಗಿ ಸಿದ್ಧಪಡಿಸಿದ ಬಂಡಿ ಅನ್ನದ ಭಕ್ಷಣ- ಮುಂತಾದ ಯಾವುದೇ ಘಟನೆ ಭೀಮಸೇನನ ದೇಹದ ವಿಕಾರಕ್ಕೆ ಕಾರಣವಾಗಿಲ್ಲ ಎಂದ ಮೇಲೆ ಅಂತಹ ಭೀಮಸೇನನ ದೇಹ ಯಾವ ರೋಗಕ್ಕೆ ಹೇಗೆ ತಾನೇ ಬಲಿಯಾದೀತು? ಮೂರನೆಯ ಮಧ್ವರೂಪದಲ್ಲಿಯೂ ನೂರಾರು ಬಾಳೆಹಣ್ಣುಗಳ ಭಕ್ಷಣೆ ಕೊಡಗಟ್ಟಲೆ ಕ್ಷೀರಪಾನ, ಬದರಿಯಲ್ಲಿ ಶೀತಲ ಗಂಗಾಸ್ನಾನಗಳು ರೋಗಕಾರಣವಾಗಲಿಲ್ಲ.

('ಧನ್ವಂತರಿ' ಸಂಚಿಕೆಯಿಂದ)

# ವಿಷ್ಣುಸಹಸ್ರನಾಮ ಮತ್ತು ರೋಗ ಪರಿಹಾರ

-ವಿದ್ವಾನ್ ಸಗ್ರಿ ರಾಘವೇಂದ್ರಾಚಾರ್ಯ

**''ವಿಷ್ಣುಂ ಸಹಸ್ರಮೂರ್ಧಾನಂ ಚರಾಚರಪತಿಂ ಪ್ರಭುಮ್ ।**
**ಸ್ತುವನ್ನಾಮಸಹಸ್ರೇಣ ಜ್ವರಾನ್ ಸರ್ವಾನ್ ವ್ಯಪೋಹತಿ ॥''**

ಸಾವಿರಾರು ತಲೆಯೇ ಮುಂತಾದ ಅವಯವಗಳುಳ್ಳ ಜಗದೊಡೆಯನಾದ, ಸರ್ವ ಸಮರ್ಥನಾದ ಶ್ರೀ ವಿಷ್ಣುವನ್ನು ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರದಿಂದ ಸ್ತುತಿಸುವವನು ಎಲ್ಲ ಬಗೆಯ ಜ್ವರಗಳಿಂದಲೂ ಉಪಶಮನ ಹೊಂದುವನೆಂದು 'ವಿಷ್ಣು ಧರ್ಮೋತ್ತರ' (2-110-12) ಸಂದೇಶಿಸಿದೆ. ಆಯುರ್ವೇದದ ಪ್ರಸಿದ್ಧ ಗ್ರಂಥವಾದ ಚರಕ ಸಂಹಿತೆಯಲ್ಲಿಯೂ (6-3-306) ಉಲ್ಲೇಖಿಸಲ್ಪಟ್ಟಿರುವ ಈ ಮಾತಿನಿಂದ ಶ್ರೀ ವಿಷ್ಣುಸಹಸ್ರನಾಮ ಸ್ತೋತ್ರಕ್ಕೆ ಸರ್ವಜ್ವರ ಪರಿಹಾರ ಶಕ್ತಿ ಇದೆ ಎಂದು ಸ್ಪಷ್ಟವಾಗುವುದು.

ಶ್ರೀ ವಿಷ್ಣುಸಹಸ್ರನಾಮ ಸ್ತೋತ್ರವನ್ನು ಉಪದೇಶಿಸಿದ ಭೀಷ್ಮರೇ ಪ್ರಸ್ತಾವನೆಯಲ್ಲಿ ''...ಲೋಕಾಧ್ಯಕ್ಷಂ ಸ್ತುವನ್ ನಿತ್ಯಂ ಸರ್ವದುಃಖಾತಿಗೋ ಭವೇತ್'' ಜಗತ್ತಿಗೆ ಅಧಿಪತಿಯಾದ ಶ್ರೀ ಹರಿಯನ್ನು ವಿಷ್ಣುಸಹಸ್ರನಾಮ ಎಂದು ಸ್ತುತಿಸುವವನು ಎಲ್ಲ ಬಗೆಯ ದುಃಖದಿಂದಲೂ ದೂರನಾಗುವನು ಎಂದು ತಿಳಿಸಿರುವರು.

ಸ್ತೋತ್ರದ ಕೊನೆಯಲ್ಲಿ ನಿರೂಪಿಸಿದ 'ಫಲಶ್ರುತಿ'ಯಲ್ಲಿ ವಿಷ್ಣುಸಹಸ್ರನಾಮದ ಫಲಗಳನ್ನು ಉಲ್ಲೇಖಿಸುತ್ತ ''ಭವತ್ಯರೋಗೋ ದ್ಯುತಿಮಾನ್ ಬಲರೂಪಗುಣಾನ್ವಿತಃ''

ಈ ಸ್ತೋತ್ರದ ಶ್ರವಣಾದಿಗಳನ್ನು ನಡೆಸುವವನು ದೈಹಿಕ ಬಲಾದಿಗಳಿಂದ ಸಂಪನ್ನನಾಗಿ ಆರೋಗ್ಯ ಸಂಪನ್ನನಾಗಿ ಮೆರೆಯುವನು, 'ರೋಗಾರ್ತೋ ಮುಚ್ಯತೇ ರೋಗಾತ್...'' ಒಂದೊಮ್ಮೆ ರೋಗ ಪೀಡಿತನಾದವನು ಈ ಸ್ತೋತ್ರದ ಶ್ರವಣಾದಿಗಳನ್ನು ನಡೆಸಿದನೆಂದರೆ ರೋಗದ ಉಪಶಮನವನ್ನು ಹೊಂದುವನು - ಎಂದು ತಿಳಿಸಿರುವರು.

ಹೀಗೆ ಶ್ರೀ ವಿಷ್ಣುಸಹಸ್ರನಾಮ ರೋಗ ಪರಿಹಾರಕವೆಂದು ವ್ಯಾಪಕವಾಗಿ ಪ್ರತಿಪಾದ್ಯವಾಗಬೇಕಾದರೆ ಅಂತಹ ವಿಷ್ಣುಸಹಸ್ರನಾಮಕ್ಕೂ ರೋಗ ಪರಿಹಾರಕ್ಕೂ ಇರುವ ನಂಟನ್ನು ವಿಶ್ಲೇಷಿಸಿಕೊಳ್ಳಬೇಕು.

## ಆಯುಷ್ಯದ ಹಾಗೂ ನಾಡಿಗಳ ನಂಟು

ಮನುಷ್ಯನ ನೂರು ವರ್ಷಗಳ ಆಯುಷ್ಯ ಮೂವತ್ತಾರು ಸಾವಿರ ಹಗಲುಗಳನ್ನೂ, ಅಷ್ಟೇ ರಾತ್ರಿಗಳನ್ನೂ ಒಳಗೊಂಡಿರುತ್ತದೆ. ಈ ಮೂವತ್ತಾರು ಸಾವಿರ ಹಗಲುಗಳನ್ನು ಭಗವಂತನ ಮೂವತ್ತಾರು ಸಾವಿರ ಪುರುಷ ರೂಪಗಳೂ, ಮೂವತ್ತಾರು ಸಾವಿರ ರಾತ್ರಿಗಳನ್ನು ಭಗವಂತನ ಮೂವತ್ತಾರು ಸಾವಿರ ಸ್ತ್ರೀ ರೂಪಗಳೂ ನಿಯಮಿಸುತ್ತಿರುತ್ತವೆ. ಹಾಗೆಯೇ ಮನುಷ್ಯನ ಶರೀರದ ಬಲಬದಿಯಲ್ಲಿ ಮೂವತ್ತಾರು ಸಾವಿರ ನಾಡಿಗಳೂ, ಎಡಬದಿಯಲ್ಲಿ ಮೂವತ್ತಾರು ಸಾವಿರ ನಾಡಿಗಳೂ ಇದ್ದು, ಅವುಗಳಲ್ಲಿ ಅಷ್ಟೇ ಸಂಖ್ಯೆಯಲ್ಲಿ ಭಗವಂತನ ಪುರುಷ ರೂಪಗಳೂ, ಸ್ತ್ರೀ ರೂಪಗಳೂ ನಿಯಾಮಕಗಳಾಗಿವೆ.

ಹೀಗೆ ಮಾನವನ ಆಯುಷ್ಯದ ಹಗಲಿರುಳುಗಳನ್ನೂ, ಶರೀರದ ನಾಡಿಗಳನ್ನೂ ನಿಯಂತ್ರಿಸುತ್ತಿರುವ ಎಪ್ಪತ್ತೆರಡು ಸಾವಿರ ಭಗವದ್ರೂಪಗಳ ಸ್ತುತಿರೂಪದಲ್ಲಿ ಇರುವಂತಹದ್ದು ಬೃಹತೀ ಸಹಸ್ರ. ಬೃಹತೀ ಛಂದಸ್ಸಿನಲ್ಲಿ ಬದ್ಧಗಳಾದ ಸಾವಿರ ಋಙ್ಮಂತ್ರಗಳ ಸಮುದಾಯವೇ ಬೃಹತೀ ಸಹಸ್ರ. ಉತ್ತಮವಾದ ಈ ಸ್ತೋತ್ರವು ತನ್ನ ಮೂವತ್ತಾರು ಸಾವಿರ ಸ್ವರಾಕ್ಷರಗಳಿಂದ ಭಗವಂತನ ಮೂವತ್ತಾರು ಸಾವಿರ ಪುರುಷ ರೂಪಗಳನ್ನು ಸ್ತುತಿಸುತ್ತಿದ್ದರೆ,

ಮೂವತ್ತಾರು ಸಾವಿರ ವ್ಯಂಜನಾಕ್ಷರಗಳಿಂದ ಭಗವಂತನ ಮೂವತ್ತಾರು ಸಾವಿರ ಸ್ತ್ರೀ ರೂಪಗಳನ್ನು ಸ್ತುತಿಸುತ್ತಿದೆ. ಇಂತಹ 'ಬೃಹತೀಸಹಸ್ರ' - ಶ್ರೀ ವಿಷ್ಣುಸಹಸ್ರನಾಮದ ವ್ಯಾಖ್ಯಾನ ರೂಪದಲ್ಲಿದ್ದು ಶ್ರೀ ವಿಷ್ಣುಸಹಸ್ರನಾಮದ ಸಾವಿರ ರೂಪಗಳನ್ನೇ ಬೃಹತೀ ಸಹಸ್ರ ತನ್ನ ಸಾವಿರ ಮಂತ್ರಗಳಿಂದ ಪ್ರತ್ಯೇಕವಾಗಿ ವಿವರಿಸುತ್ತಿದೆ-

**'ವಿಷ್ಣೋಃ ಸಹಸ್ರನಾಮ್ನಸ್ತು ಯತ್ ತದ್ ರೂಪಸಹಸ್ರಕಮ್ ।**
**ಬೃಹತೀಸಹಸ್ರಮೇತಚ್ಚ ತದ್ ವಕ್ತಿ ಚ ಪೃಥಕ್ ಪೃಥಕ್'**

ಶ್ರೀ ಮಧ್ವಾಚಾರ್ಯರು ತಮ್ಮ ಐತರೇಯ ಭಾಷ್ಯದಲ್ಲಿ (2-2-4-3) 'ಬೃಹತೀಸಹಸ್ರ'ದ ಹಿರಿಮೆಯನ್ನೂ ಅದಕ್ಕೂ ವಿಷ್ಣುಸಹಸ್ರನಾಮಕ್ಕೂ ಇರುವ ನಂಟನ್ನು ವಿವರಿಸಿರುವರು.

ಅಂತೂ ಮನುಷ್ಯನ ಆಯುಷ್ಯದ ಹಗಲಿರುಳುಗಳ ಭಗವದ್ರೂಪಗಳಿಗೂ, ನಾಡಿಗಳ ಭಗವದ್ರೂಪಗಳಿಗೂ ಬೃಹತೀಸಹಸ್ರದ ಸಂಬಂಧವಿದ್ದು ಅಂತಹ ಬೃಹತೀಸಹಸ್ರದ ಮೂಲ - ವ್ಯಾಖ್ಯೇಯ ರೂಪದಲ್ಲಿ ಶ್ರೀ ವಿಷ್ಣುಸಹಸ್ರನಾಮ ಇರುವುದರಿಂದ ಈ ಅನುಸಂಧಾನಪೂರ್ವಕವಾಗಿ ಪಠಿತವಾದ ಶ್ರೀ ವಿಷ್ಣುಸಹಸ್ರನಾಮ ಆಯುಷ್ಯದ ರಕ್ಷಣೆಗೂ, ನಾಡಿಗಳ ಶುದ್ಧಿಗೂ ಪ್ರಯೋಜಕವಾಗಬಲ್ಲದು.

## ತಂ ಯಥಾ ಯಥೋಪಾಸತೇ ತದೇವ ಭವತಿ

ಅಲ್ಲದೆ ''ತಂ ಯಥಾ ಯಥೋಪಾಸತೇ ತದೇವ ಭವತಿ'' ಎಂಬ ಶ್ರುತಿ ಸಾರುತ್ತಿರುವಂತೆ ಭಗವಂತನನ್ನು ಯಾವ ಯಾವ ಗುಣಧರ್ಮ ಸಂಪನ್ನನನ್ನಾಗಿ ಉಪಾಸಿಸಲಾಗುವುದೋ ಆ ಉಪಾಸನೆಯ ಫಲವಾಗಿ ಅಂತಹ ಗುಣ ಧರ್ಮಗಳ ಸಂಪತ್ತನ್ನು ಅವನು ಅನುಗ್ರಹಿಸುವನು. ವಿಷ್ಣುಸಹಸ್ರನಾಮದ ಸ್ತುತ್ಯಾದಿಗಳಿಂದ ರೋಗ ಪರಿಹಾರ ರೂಪವಾದ ಪ್ರಯೋಜನವನ್ನು ಪಡೆದುಕೊಳ್ಳಬೇಕಾದರೆ ರೋಗಗಳನ್ನು

ನೀಡುವಲ್ಲಿಯೂ, ಅದನ್ನು ಪರಿಹರಿಸುವಲ್ಲಿಯೂ ಭಗವಂತನ ಪಾತ್ರವನ್ನು ಪ್ರತಿಪಾದಿಸುವ ಭಗವನ್ನಾಮಗಳ ಮೂಲಕ ಅವನ ಆ ಪಾತ್ರದ ಅನುಸಂಧಾನ ನಡೆಸಬೇಕು; ಸ್ತುತಿ ನಡೆಸಬೇಕು.

## ಐದು ಬಗೆಯ ನಾಮಗಳು

ರೋಗಗಳನ್ನು ನೀಡುವಲ್ಲಿಯೂ, ಪರಿಹರಿಸುವಲ್ಲಿಯೂ ಭಗವಂತನ ಪಾತ್ರವನ್ನು ತಿಳಿಸುವ ಹೆಸರುಗಳನ್ನು ಐದು ಬಗೆಯಾಗಿ ವಿಂಗಡಿಸಬಹುದಾಗಿದೆ.

1. ಭಗವಂತನ ರೋಗ ಪರಿಹಾರಕತ್ವ ಸಾಮರ್ಥ್ಯವನ್ನು ಸಾರುವ ವೈದ್ಯ, ಭಿಷಕ್, ಔಷಧಮ್, ಭೇಷಜಮ್ ಮುಂತಾದ ನಾಮಗಳು.
2. 'ಪೂರ್ವಜನ್ಮಕೃತಂ ಪಾಪಂ ವ್ಯಾಧಿರೂಪೇಣ ಜಾಯತೇ' ಎಂದಿರುವಂತೆ ರೋಗಗಳಿಗೆ ಪ್ರಯೋಜಕಗಳಾದ ಪಾಪಗಳ ನಿಯಂತ್ರಣದಲ್ಲಿ ಭಗವಂತನ ಪಾತ್ರವನ್ನು ಸಾರುವ ಪಾಪನಾಶನ, ಉತ್ತಾರಣ, ದುಷ್ಕೃತಿಹಾ ಮುಂತಾದ ನಾಮಗಳು.
3. ಪಾಪಪ್ರಯುಕ್ತವಾಗಿ ರೋಗ ಕಾಣಿಸಿಕೊಳ್ಳಲು ಪೃಥಿವ್ಯಾದಿ ಪಂಚಭೂತಗಳೂ, ಬಿಸಿಲು, ಮಳೆ ಮುಂತಾದ ಪ್ರಾಕೃತಿಕ ಘಟನೆಗಳೂ ಅವಾಂತರ ಪ್ರಯೋಜಕಗಳೆನಿಸಿದ್ದು, ಅವುಗಳ ಸಂಯೋಜನೆಯಲ್ಲಿ ಭಗವಂತನ ಪಾತ್ರವನ್ನು ಸಾರುವ ಸಂಧಾತಾ, ವಾಯುವಾಹನ, ಪ್ರತಾಪನ ಇತ್ಯಾದಿ ನಾಮಗಳು.
4. ಪಂಚಭೂತಗಳಾಗಲೀ, ಅವುಗಳ ವಿಕಾರಗಳಾಗಲೀ ರೋಗಕ್ಕೆ ಪ್ರಯೋಜಕಗಳೆನಿಸಬೇಕಾದರೆ ಮನುಷ್ಯನ ಶರೀರ, ಅವಯವಗಳು, ಇಂದ್ರಿಯಗಳು, ಅವುಗಳ ಚಟುವಟಿಕೆಗಳು, ಅವಸ್ಥೆಗಳು- ಇವೆಲ್ಲವುಗಳ ಪಾತ್ರವೂ ಪ್ರಮುಖವಾಗಿದ್ದು, ಇವುಗಳ ನಿಯಂತ್ರಣದಲ್ಲಿ ಭಗವಂತನ ಪಾತ್ರವನ್ನು ಸಾರುವ ಶರೀರಭೃತ್,

ಶುಭಾಂಗ, ಹೃಷೀಕೇಶ, ಸ್ವಾಪನ, ಅಸ್ವಾದ ಮುಂತಾದ ನಾಮಗಳು.

5. ರೋಗಗಳು ಸೂರ್ಯ, ಚಂದ್ರ ಮುಂತಾದ ಗ್ರಹಗಳಿಂದ ಸೂಚಿತ ಗಳಾಗುತ್ತಿದ್ದು, ಅಂತಹ ರೋಗಸೂಚಕ ಗ್ರಹಗಳ ನಿಯಂತ್ರಣದಲ್ಲಿ ಭಗವಂತನ ಪಾತ್ರವನ್ನು ಸಾರುವ ಹಾಗೂ ರೋಗ ಸೂಚಕ ದುಃಸ್ವಪ್ನ ಮುಂತಾದ ಶಕುನಗಳನ್ನು ನಿಯಮಿಸುವಲ್ಲಿಯೂ ಭಗವಂತನ ಪಾತ್ರವನ್ನು ಸಾರುವ ರವಿಲೋಚನ, ತೇಜೋವೃಷ, ಪ್ರಗ್ರಹ, ದುಃಸ್ವಪ್ನನಾಶನ ಮುಂತಾದ ನಾಮಗಳು.

## ಸ್ಥೂಲವಾದ ಅನುಸಂಧಾನ

ಈ ಐದು ಬಗೆಯ ಹೆಸರುಗಳಿಂದ ಸ್ಥೂಲ ಅನುಸಂಧಾನವನ್ನು ಹೀಗೆ ತಂದುಕೊಳ್ಳಬಹುದು.

ಭಗವಂತನು ಭವರೋಗಕ್ಕೆ ವೈದ್ಯನಾಗಿರುವಂತೆ, ಭವದಲ್ಲಿ ಉಂಟಾಗುವ ದೈಹಿಕ ರೋಗಗಳಿಗೂ ವೈದ್ಯ. ವೈದ್ಯ (162) ಭಿಷಕ್ (583) ರುದ್ರ (116) ಅನಾಮಯ(1693) ಮುಂತಾದ ನಾಮಗಳು ಭಗವಂತನ ವೈದ್ಯ ವ್ಯಕ್ತಿತ್ವವನ್ನು ಸಾರುತ್ತಿದೆ. ಭೇಷಜಂ (582) ಔಷಧಂ(290) ಮುಂತಾದ ನಾಮ ಔಷಧದಲ್ಲಿದ್ದುಕೊಂಡು ಅದರ ರೋಗ ಪರಿಹಾರಕತ್ವ ಶಕ್ತಿಯನ್ನು ತಿಳಿಸುತ್ತಿವೆ.

ಪುಣ್ಯ ಪಾಪಗಳು ಆಯಾ ಫಲವನ್ನು ನೀಡುವಂತೆ ಮಾಡುವ ಅವನು ಪಾಪದ ಫಲವಾಗಿ ಬೇರೆ ಬೇರೆ ರೋಗಗಳನ್ನು ನೀಡುವವನೂ, ಸ್ತುತ್ಯಾದಿ ಗಳಿಂದ ಪ್ರಸನ್ನನಾಗಿ ಆ ಪಾಪವನ್ನು ಪರಿಹರಿಸಿ ತತ್ಪ್ರಯುಕ್ತವಾದ ರೋಗ ವನ್ನು ದೂರಮಾಡುವವನು ಅವನೇ ಸಂಧಾತಾ(204) ಪ್ರತಾಪನ(280) ದಂಡ(864) ದಮಯಿತಾ(865) ಮುಂತಾದ ನಾಮಗಳಿಂದ ಪಾಪದ ಪರಿಪಾಕರೂಪದಲ್ಲಿ ಅವನ ರೋಗಪ್ರದತ್ವ ಧರ್ಮವನ್ನು ಅನುಸಂಧಾನ ಮಾಡಬಹುದಾದರೆ, ಅನಘ(149) ಪಾಪನಾಶನ(396) ದುಷ್ಕೃತಿಹಾ

(929) ಉತ್ತಾರಣ(928) ಮುಂತಾದ ನಾಮಗಳಿಂದ ಅವನ ಪಾಪ ಪರಿಹಾರ ಪೂರ್ವಕವಾಗಿ ರೋಗ ಪರಿಹಾರಕತ್ವ ಧರ್ಮವನ್ನು ಅನುಸಂಧಾನ ಮಾಡಬಹುದಾಗಿದೆ.

ವೈಕುಂಠ(419) ಮಹೀಭರ್ತಾ(185) ವಾಯುವಾಹನ (378) ವೃಷಭ(260) ಮರೀಚಿ(192) ಅಮೃತಾಂಶೂದ್ಭವ (289) ಜ್ಯೋತಿರ್ಗಣೇಶ್ವರ (623) ಸಂವತ್ಸರ(426) -ಮುಂತಾದ ನಾಮಗಳು ಭೂಮಿಯೇ ಮುಂತಾದ ಪಂಚಭೂತಗಳನ್ನು, ಮಳೆಯೇ ಮುಂತಾದ ಪ್ರಾಕೃತಿಕ ಘಟನೆಗಳನ್ನೂ ಸಂಯೋಜಿಸುವಲ್ಲಿ ಅವನ ಪಾತ್ರವನ್ನು ಎತ್ತಿ ತೋರಿಸುವ ಮೂಲಕ ಅಂತಹ ಪಂಚಭೂತಗಳ, ಪ್ರಾಕೃತಿಕ ಘಟನೆಗಳ ಸಂಪರ್ಕದಿಂದಾಗಿ ಸಂಭವಿಸುವ ರೋಗಗಳ ನಿಯಮನದಲ್ಲಿ ಅವನ ಪಾತ್ರವನ್ನು ಸಾರುತ್ತಿವೆ.

ರೋಗಗಳು ಕಾಣಿಸುವ ಶರೀರ, ಅದರ ಅವಯವಗಳು, ಇಂದ್ರಿಯ ಗಳು, ಮನಸ್ಸು, ಅದರ ಚಟುವಟಿಕೆಗಳನ್ನೂ, ಅವಸ್ಥೆಗಳನ್ನೂ ನಿಯಂತ್ರಿಸು ವವನು ಭಗವಂತನೆಂದು ಸಾರುವ ಶರೀರಭೃತ್(353) ಮಹಾಕೋಶ (439) ತ್ವಷ್ಟಾ (52) ಜೀವನ(938) ಪರ್ಯವಸ್ಥಿತ(939) ಹೃಷೀಕೇಶ (47) ಮನೋಜವ(694) ಸ್ವಾಪನ(469) ತ್ರಿದಶಾಧ್ಯಕ್ಷ(539) ಭೋಕ್ತಾ (146) ಮುಂತಾದ ನಾಮಗಳಿಂದ ಭಗವಂತನು ಶರೀರಾದಿಗಳನ್ನು ನಿಯಂತ್ರಿಸುವ ಮೂಲಕ ರೋಗಪ್ರದ ಹೇಗೆ ಆಗಬಲ್ಲ? ರೋಗ ಪರಿಹಾರಕ ಹೇಗೆ ಆಗಬಲ್ಲ? ಎಂದು ಅನುಸಂಧಾನ ಮಾಡಬಹುದಾಗಿದೆ.

ವ್ಯಕ್ತಿಗಳಿಗೆ ರೋಗಗಳನ್ನು ಸೂಚಿಸುವ ಸೂರ್ಯ, ಚಂದ್ರ ಮುಂತಾದ ಗ್ರಹಗಳ ವಿಷಯದಲ್ಲಿ ಕೆಟ್ಟ ಸ್ವಪ್ನ ಮುಂತಾದ ಶಕುನಗಳ ವಿಷಯದಲ್ಲಿ ಭಗವಂತನ ಪಾತ್ರವನ್ನು ತಿಳಿಸುವ ಪ್ರಗ್ರಹ(694) ಭಾಸ್ಕರದ್ಯುತಿ(285) ವಿಹಾಯಸಗತಿ(881) ದುಃಸ್ವಪ್ನನಾಶನ(931) ಸ್ವಾಪನ(469) ಮುಂತಾದ ನಾಮಗಳು ಗ್ರಹಗಳನ್ನೂ ಸ್ವಪ್ನ ಮುಂತಾದ

ಶಕುನಗಳನ್ನೂ ನಿಯಂತ್ರಿಸುವ ಮೂಲಕ ಭಗವಂತನು ಅವುಗಳಿಂದ ಸೂಚಿತ ರೋಗಗಳ ನೀಡುವಲ್ಲಿಯೂ, ಪರಿಹರಿಸುವಲ್ಲಿಯೂ ಅವನ ಪಾತ್ರವನ್ನು ಸೂಚಿಸಿಕೊಡಬಲ್ಲವು.

ಹೀಗೆ ರೋಗಗಳ ಉತ್ಪಾದನೆಯಲ್ಲೂ, ಉಪಶಮನದಲ್ಲೂ ಭಗವಂತನ ಪಾತ್ರವನ್ನು ವಿಷ್ಣುಸಹಸ್ರನಾಮದ ಬೇರೆಬೇರೆ ನಾಮಗಳಿಂದ ಅನುಸಂಧಾನ ಮಾಡಿದಾಗ ಅದರಿಂದ ಪ್ರಸನ್ನರಾಗುವ ಅವನ ಅನುಗ್ರಹದಿಂದ ರೋಗಗಳಿಂದ ದೂರರಾಗಿ ಆರೋಗ್ಯ ಭಾಗ್ಯವನ್ನು ಪಡೆದುಕೊಳ್ಳಬಹುದಾಗಿದೆ.

('ಧನ್ವಂತರಿ' ಸಂಚಿಕೆಯಿಂದ)

---

೧. **ಧಂ ಧನಂ ಧೈರ್ಯಂ ವಾ ನಾಶಯಂತೀತಿ ಧನವೋ ರೋಗಾಃ।**
**ತೇಷಾಮಂತಂ ರಾತಿ ದದಾತೀತಿ ಧನ್ವಂತರಿಃ ರೋಗನಾಶಕಃ॥**
**(ವಂಶೀಧರ)**

ಧನು-ಧನವನ್ನು ಧೈರ್ಯವನ್ನು ನಾಶಮಾಡುವ ರೋಗಗಳಿಗೆ, ಅಂತ-ನಾಶವನ್ನು, ರಿ-ಕೊಡುವನು. (ಧನ್ವಂತರಿ)

೨. **ಧನ್ವಂ ಪಾಪಂ ತರತಿ। ತಾರಯತೀತರಾನಿತಿ।**
**ಧನ್ವಮಿತಿ ಪಾಪಜೋ ರೋಗಃ (ಸತ್ಯಧರ್ಮತೀರ್ಥಃ)**
ಧನ್ವ-ಪಾಪದಿಂದ ಬರುವ ರೋಗವನ್ನು, ತರಿ-ಪರಿಹರಿಸುವವನು.

೩. **ಧನುರ್ವೇದಸ್ಯಾಂತಂ ಋಚ್ಛತೀತಿ ಧನ್ವಂತರೀ ಧನ್ವೀ ಇತ್ಯರ್ಥಃ।**
ಧನ್ವಂತ-ಧನುರ್ವೇದಾಂತವನ್ನು, ರಿ-ತಿಳಿದವನು.

೪. **ಪ್ರಣವೋ ಧನುರುಚ್ಯತೇ ಇತ್ಯತಃ ತಸ್ಯಾಂತಃ ನಿರ್ಣಯಃ ಭಗವಾನ್।**
**ತಂ ಪ್ರಾಪಯತೀತಿ ವಾ ॥**

ಧನು-ಪ್ರಣವವೆಂಬ ಧನುಸ್ಸಿನ ಅಂತ-ನಿರ್ಣಯ ವಿಷಯನಾದ ಭಗವಂತನನ್ನು ರಿ-ತಲುಪಿಸುವವನು.

# ಪ್ರಾಣಾಯಾಮ ಮತ್ತು ಆಯುಷ್ಯ, ಆರೋಗ್ಯ

ಸನ್ನಿಯಮ್ಯೇಂದ್ರಿಯಗ್ರಾಮಂ ನಾತಿನೀಚೋಛ್ರಿತಾಸನಃ ।
ಮಧ್ಯಮಂ ಚೋತ್ತಮಂ ಚಾಥ ಪ್ರಾಣಾಯಾಮಮುಪಕ್ರಮೇತ್ ॥

ಚಲೇಽನಿಲೇ ಚಲಂ ಸರ್ವಂ ನಿಶ್ಚಲಂ ತತ್ರ ನಿಶ್ಚಲೇ ।
ಸ್ಥಾಣುತ್ವಮಾಪ್ನುಯಾತ್ ಯೋಗೀ ತತೋಽನಿಲನಿರೋಧನಾತ್ ॥

ಯಾವದ್ದೇಹೇ ಸ್ಥಿತಃ ಪ್ರಾಣಃ ಜೀವಿತಂ ತಾವದುಚ್ಯತೇ ।
ನಿರ್ಗತೇ ತತ್ರ ಮರಣಂ ತತಃ ಪ್ರಾಣಂ ನಿರೋಧಯೇತ್ ॥

ಪ್ರಾಣಾಯಾಮೇನ ಯುಕ್ತೇನ ಸರ್ವವ್ಯಾಧಿಕ್ಷಯೋ ಭವೇತ್ ।
ಅಯುಕ್ತಾಭ್ಯಾಸಯೋಗೇನ ಸರ್ವವ್ಯಾಧಿಸಮುದ್ಭವಃ ॥

–ಕಾಶೀಖಂಡೇ

ಇಂದ್ರಿಯಗಳ ಸಮೂಹವನ್ನು ನಿಯಂತ್ರಿಸಿಕೊಂಡು ಅತಿ ಎತ್ತರವೂ ಅಲ್ಲದ ಅತಿ ತಗ್ಗೂ ಅಲ್ಲದ ಮಧ್ಯಮಾಸನದಲ್ಲಿ ಕುಳಿತು ಪ್ರಾಣಾಯಾಮ ವನ್ನು ಆರಂಭಿಸಬೇಕು. ವಾಯು ಚಲವಾದರೆ ಎಲ್ಲವೂ ಚಲವಾಗುವುದು. ವಾಯು ನಿಶ್ಚಲವಾದರೆ ದೇಹವು ನಿಶ್ಚಲವಾಗುವುದು. ಆದ್ದರಿಂದ ಯೋಗಿ ಕುಂಭಕಸ್ಥಿತಿಯಲ್ಲಿ ಪ್ರಾಣವಾಯುವನ್ನು ನಿರೋಧಗೊಳಿಸಿ ಸ್ಥಾಣುವಿನಂತೆ ಅಚಲನಾಗುತ್ತಾನೆ. ದೇಹದಲ್ಲಿ ಪ್ರಾಣವಾಯು ಇರುವವರೆಗೆ ಜೀವನ. ದೇಹದಿಂದ ಪ್ರಾಣವಾಯು ನಿರ್ಗಮಿಸಿದರೆ ಮರಣ. ಆದುದರಿಂದ

ಪ್ರಾಣವನ್ನು ನಿರೋಧಿಸಿಕೊಳ್ಳಬೇಕು. ಯೋಗ್ಯವಾದ ರೀತಿಯಿಂದ ಪ್ರಾಣಾಯಾಮ ಮಾಡಿದರೆ ಸರ್ವವ್ಯಾಧಿ ಪರಿಹಾರ. ಅಯೋಗ್ಯವಾದ ರೀತಿ ಪ್ರಾಣಾಯಾಮ ಮಾಡಿದರೆ ಸರ್ವವ್ಯಾಧಿಗಳ ಉತ್ಪತ್ತಿ.

21,600 ಬಾರಿ ಉಸಿರಾಟವಾದರೆ ಒಂದು ದಿನವೆನಿಸುವುದು. ಇಂತಹ ಮುನ್ನೂರು ಅರವತ್ತು ದಿನವಾದರೆ ಒಂದು ವರ್ಷ. ಅಂದರೆ 21,600 X 360=77,76,000 ಉಸಿರಾಟವಾದರೆ 1 ವರ್ಷ. ಹೀಗೆ ನೂರು ವರ್ಷಗಳೆಂದರೆ 77,76,000X100=777,7600000 (ಎಪ್ಪತ್ತೇಳುಕೋಟಿ 76 ಲಕ್ಷ) ಉಸಿರಾಟಗಳು. ಈ ಉಸಿರಾಟ ನಡೆದಾಗ ದೇಹದೊಳಗಣ ಕ್ಯಾಲೆಂಡರ್‌ನಂತೆ 100 ವರ್ಷಗಳು ಸಲ್ಲುತ್ತವೆ. ಉಸಿರಾಟಗಳು ವೇಗವಾಗಿ ನಡೆದರೆ ಹೊರಗಡೆ 80 ವರ್ಷಗಳಿಗೇ ಇಷ್ಟು ಉಸಿರಾಟಗಳಾಗಿ 100 ವರ್ಷ ಮುಗಿದೇ ಬಿಟ್ಟಿರುತ್ತದೆ. ಪ್ರಾಣಾಯಾಮದ ಸತತ ಅಭ್ಯಾಸದಿಂದ ಇವೇ ಉಸಿರಾಟಗಳನ್ನು ನಿಧಾನವಾಗಿ ನಡೆಸಿದಾಗ ಅವನು ಹೊರಗಿನ ಲೆಕ್ಕ ದಲ್ಲಿ ನೂರಾರು ವರ್ಷ ಬದುಕಬಹುದು. ಋಷಿಗಳು ಪ್ರಾಣಾಯಾಮದ ಬಲದಿಂದಲೆ ನೂರಾರು ಸಾವಿರಾರು ವರ್ಷ ಬದುಕಿದ್ದರು.

---

ಸೀಸಪದ್ಯ

ಆತ್ಮ ಪೋದರೆ ದೇಹವಗ್ನಿಹೋತ್ರನ ಪಾಲು
ಕಠಿಣಶಲ್ಯಗಳೆಲ್ಲ ಗಂಗೆ ಪಾಲು
ಮೇಲೆ ಕಟ್ಟಿದ ವಸ್ತ್ರಜಾಲವಗಸನ ಪಾಲು
ಹೂತಿಟ್ಟ ಧನ ಧಾನ್ಯ ಧರಣಿ ಪಾಲು
ಮಗನು ಹಾಕುವ ಪಿಂಡವದು ಕಾಗೆಗಳ ಪಾಲು
ಅರಿಯೆ ಜೀವನು ಕಾಲಯಮನ ಪಾಲು
ತಾನು ಮಾಡಿದ ಪಾಪಪುಣ್ಯಗಳೆರಡೇ
ನೆರೆಯಾಗಿ ಬರ್ಪುದು ಮತ್ತೊಂದು ಬಾರದು ಬಾರದು ॥

ಲಕ್ಷ್ಮೀರುವಾಚ ।

ಯತ್ತ್ವಯೋಕ್ತಮಿದಂ ಸ್ತೋತ್ರಂ ಯಃ ಪಠಿಷ್ಯತಿ ಮಾನವಃ ।
ಶೃಣೋತಿ ಚ ಮಹಾಭಾಗಸ್ತಸ್ಯಾಹಂ ವಶವರ್ತಿನೀ ॥೨೫॥

ನಿತ್ಯಂ ಪಠತಿ ಯೋ ಭಕ್ತ್ಯಾ ತ್ವಲಕ್ಷ್ಮೀಸ್ತಸ್ಯ ನಶ್ಯತಿ ।
ಋಣಶ್ಚ ನಶ್ಯತೇ ತೀವ್ರಂ ವಿಯೋಗೋ ನೈವ ಜಾಯತೇ ॥೨೬॥

ಯಃ ಪಠೇತ್ಪ್ರಾತರುತ್ಥಾಯ ಶ್ರದ್ಧಾಭಕ್ತಿಸಮನ್ವಿತಃ ।
ಗೃಹೇ ತಸ್ಯ ಸದಾ ಸ್ಥಾಸ್ಯೇ ನಿತ್ಯಂ ಶ್ರೀಪತಿನಾ ಸಹ ॥೨೭॥

ಸುಖಸೌಭಾಗ್ಯಸಂಪನ್ನೋ ಮನಸ್ವೀ ಬುದ್ಧಿಮಾನ್ ಭವೇತ್ ।
ಪುತ್ರವಾನ್ ಗುಣವಾನ್ ಶ್ರೇಷ್ಠೋ ಭೋಗಭೋಕ್ತಾ ಚ ಮಾನವಃ ।

ಇದಂ ಸ್ತೋತ್ರಂ ಮಹಾಪುಣ್ಯಂ ಮಹಾಲಕ್ಷ್ಮ್ಯಾಃ ಪ್ರಕೀರ್ತಿತಮ್ ।
ವಿಷ್ಣುಪ್ರಸಾದಜನನಂ ಚತುರ್ವರ್ಗಫಲಪ್ರದಮ್ ॥೨೯॥

ರಾಜದ್ವಾರೇ ಜಯಶ್ಚೈವ ಶತ್ರೋಶ್ಚೈವ ಪರಾಜಯಃ ।
ಭೂತಪ್ರೇತಪಿಶಾಚಾನಾಂ ವ್ಯಾಘ್ರಾಣಾಂ ನ ಭಯಂ ತಥಾ ॥೩೦॥

ನ ಶಸ್ತ್ರಾನಲತೋಯೌಘಾದ್ಭಯಂ ತಸ್ಯ ಪ್ರಜಾಯತೇ ।
ದುರ್ವೃತ್ತಾನಾಂ ಚ ಪಾಪಾನಾಂ ಬಹುಹಾನಿಕರಂ ಪರಮ್ ॥೩೧॥

ಮಂದುರಾಕರಿಶಾಲಾಸು ಗವಾಂ ಗೋಷ್ಠೇ ಸಮಾಹಿತಃ ।
ಪಠೇತ್ತದ್ದೋಷಶಾಂತ್ಯರ್ಥಂ ಮಹಾಪಾತಕನಾಶನಮ್ ॥೩೨॥

ಸರ್ವಸೌಖ್ಯಕರಂ ನೃಣಾಮಾಯುರಾರೋಗ್ಯದಂ ತಥಾ ।
ಅಗಸ್ತ್ಯಮುನಿನಾ ಪ್ರೋಕ್ತಂ ಪ್ರಜಾನಾಂ ಹಿತಕಾಮ್ಯಯಾ ॥೩॥

॥ ಇತಿ ಅಗಸ್ತ್ಯಮುನಿವಿರಚಿತಂ ಶ್ರೀಲಕ್ಷ್ಮೀಸ್ತೋತ್ರಂ ಸಂಪೂರ್ಣಮ್ ॥

# ದುರ್ಗಾಸ್ತವಃ

ಸನ್ನದ್ಧಸಿಂಹಸ್ಕಂಧಸ್ಥಾಂ ಸ್ವರ್ಣವರ್ಣಾಂ ಮನೋರಮಾಮ್ ।
ಪೂರ್ಣೇಂದುವದನಾಂ ದುರ್ಗಾಂ ವರ್ಣಯಾಮಿ
ಗುಣಾರ್ಣವಾಮ್ ॥೧॥

ಕಿರೀಟಹಾರಗ್ರೈವೇಯನೂಪುರಾಂಗದಕಂಕಣೈಃ ।
ರತ್ನಕಾಂಚ್ಯಾ ರತ್ನಚಿತ್ರಕುಚಕಂಚುಕತೇಜಸಾ ॥೨॥

ವಿರಾಜಮಾನಾ ರುಚಿರಾಂಬರಾ ಕಿಂಕಿಣಿಮಂಡಿತಾ ।
ರತ್ನಮೇಖಲಯಾ ರತ್ನವಾಸೋಪರಿ ವಿಭೂಷಿತಾ ॥೩॥

ವೀರಶೃಂಖಲಯಾ ಶೋಭಿಚಾರುಪಾದಸರೋರುಹಾ ।
ರತ್ನಚಿತ್ರಾಂಗುಲೀ ಮುದ್ರಾರತ್ನಕುಂಡಲಮಂಡಿತಾ ॥೪॥

ವಿಚಿತ್ರಚೂಡಾಮಣಿನಾ ರತ್ನೋದ್ಯತ್ತಿಲಕೇನ ಚ ।
ಅನರ್ಘ್ಯನಾಸಾಮಣಿನಾ ಶೋಭಿತಾಸ್ಯಸರೋರುಹಾ ॥೫॥

ಭುಜಕೀರ್ತ್ಯಾ ರತ್ನಚಿತ್ರಕಂಠಸೂತ್ರೇಣ ಚಾಂಕಿತಾ ।
ಪದ್ಮಾಕ್ಷಿಣೀ ಸುಬಿಂಬೋಷ್ಠೀ ಪದ್ಮಗರ್ಭಾದಿಭಿಃ ಸ್ತುತಾ ॥೬॥

ಕಬರೀಭಾರವಿನ್ಯಸ್ತಪುಷ್ಪಸ್ತಬಕವಿಸ್ತರಾ ।
ಕರ್ಣನೀಲೋತ್ಪಲರುಚಾ ಲಸದ್‌ಭ್ರೂಮಂಡಲತ್ವಿಷಾ ॥೭॥

ಕುಂತಲಾನಾಂ ಚ ಸಂತತ್ಯಾ ಶೋಭಮಾನಾ ಶುಭಪ್ರದಾ।
ತನುಮಧ್ಯಾ ವಿಶಾಲೋರಃಸ್ಥಲಾ ಪೃಥುನಿತಂಬಿನೀ ॥೮॥

ಚಾರುದೀರ್ಘಭುಜಾ ಕಂಬುಗ್ರೀವಾ ಜಂಘಾಯುಗಪ್ರಭಾ ।
ಅಸಿಚರ್ಮಗದಾಶೂಲಧನುರ್ಬಾಣಾಂಕುಶಾದಿನಾ ॥೯॥

ವರಾಭಯಾಭ್ಯಾಂ ಚಕ್ರೇಣ ಶಂಖೇನ ಚ ಲಸತ್ಕರಾ ।
ದಂಷ್ಟ್ರಾಗ್ರಭೀಷಣಾಸ್ಯೋತ್ಥಹುಂಕಾರಾರ್ದಿತದಾನವಾ ॥೧೦॥

ಭಯಂಕರೀ ಸುರಾರೀಣಾಂ ಸುರಾಣಾಮಭಯಂಕರೀ ।
ಮುಕುಂದಕಿಂಕರೀ ವಿಷ್ಣುಭಕ್ತಾನಾಂ ಮೌಕ್ತಶಂಕರೀ ॥೧೧॥

ಸುರಸ್ತ್ರೀಕಿಂಕರೀಭಿಶ್ಚ ವೃತಾ ಕ್ಷೇಮಂಕರೀ ಚ ನಃ ।
ಆದೌ ಮುಖೋದ್ಗಿರ್ಣನಾನಾಽಽಮ್ನಾಯಾ ಸರ್ಗಕರೀ ಪುನಃ ೧೨

ನಿಸರ್ಗಮುಕ್ತಾ ಭಕ್ತಾನಾಂ ತ್ರಿವರ್ಗಫಲದಾಯಿನೀ ।
ನಿಶುಂಭಶುಂಭಸಂಹರ್ತ್ರೀ ಮಹಿಷಾಸುರಮರ್ದಿನೀ ॥೧೩॥

ತಾಮಸಾನಾಂ ತಮಃಪ್ರಾಪ್ತ್ಯೈ ಮಿಥ್ಯಾಜ್ಞಾನಪ್ರವರ್ತಿಕಾ ।
ತಮೋಽಭಿಮಾನಿನೀ ಪಾಯಾದ್ದುರ್ಗಾ ಸ್ವರ್ಗಾಪವರ್ಗದಾ ॥೧೪॥

ಇಮಂ ದುರ್ಗಾಸ್ತವಂ ಪುಣ್ಯಂ ವಾದಿರಾಜಯತೀರಿತಮ್ ।

ಪಠನ್ ವಿಜಯತೇ ಶತ್ರೂನ್ ಮೃತ್ಯುಂ ದುರ್ಗಾಣಿ ಚೋತ್ತರೇತ್ ೧೫

॥ ಇತಿ ಶ್ರೀವಾದಿರಾಜಯತಿಕೃತಃ ದುರ್ಗಾಸ್ತವಃ ಸಂಪೂರ್ಣಃ ॥

---

ಉದ್ಧತಾಸುರದುರ್ಧ್ವಾಂತವಿಧ್ವಂಸನಪಟೀಯಸಿ ।
ಸಿದ್ಧಾರಾಧ್ಯಪದೇ ದುರ್ಗೇ ಹೃದ್ರೋಗಂ ಮಮ ನಾಶಯ ॥

(ಸ.ಭಾ.ವಿ.)

# ಶ್ರೀದುರ್ಗಾಸ್ತುತಿಃ

ಸಂಜಯ ಉವಾಚ||

ಧಾರ್ತರಾಷ್ಟ್ರಬಲಂ ದೃಷ್ಟ್ವಾ ಯುದ್ಧಾಯ ಸಮುಪಸ್ಥಿತಮ್ ।
ಅರ್ಜುನಸ್ಯ ಹಿತಾರ್ಥಾಯ ಕೃಷ್ಣೋ ವಚನಮಬ್ರವೀತ್ ||೧||

ಶ್ರೀಕೃಷ್ಣ ಉವಾಚ||

ಶುಚಿರ್ಭೂತ್ವಾ ಮಹಾಬಾಹೋ ಸಂಗ್ರಾಮಾಭಿಮುಖಸ್ಥಿತಃ ।
ಪರಾಜಯಾಯ ಶತ್ರೂಣಾಂ ದುರ್ಗಾಸ್ತೋತ್ರಮುದೀರಯ ||೨||

ಏವಮುಕ್ತೋಽರ್ಜುನಃ ಸಂಖ್ಯೇ ವಾಸುದೇವೇನ ಧೀಮತಾ ।
ಅವತೀರ್ಯ ರಥಾತ್ಪಾರ್ಥಃ ಸ್ತೋತ್ರಮಾಹ ಕೃತಾಂಜಲಿಃ ||೩||

ಅರ್ಜುನ ಉವಾಚ ||

ನಮಸ್ತೇ ಸಿದ್ಧಸೇನಾನಿ ಆರ್ಯೇ ಮಂದರವಾಸಿನಿ ।
ಕುಮಾರಿ ಕಾಲಿ ಕಾಪಾಲಿ ಕಪಿಲೇ ಕೃಷ್ಣಪಿಂಗಲೇ ।
ಭದ್ರಕಾಲಿ ನಮಸ್ತುಭ್ಯಂ ಮಹಾಕಾಲಿ ನಮೋಽಸ್ತು ತೇ ||೪||

ಕಾತ್ಯಾಯನಿ ಮಹಾಭಾಗೇ ಕರಾಲಿ ವಿಜಯೇ ಜಯೇ ।
ಶಿಖಿಪಿಂಛಧ್ವಜಧರೇ ನಾನಾಭರಣಭೂಷಿತೇ ||೫||

ಅಟ್ಟಶೂಲಪ್ರಹರಣೇ ಖಡ್ಗಖೇಟಕಧಾರಿಣಿ ।
ಗೋಪೇಂದ್ರಸ್ಯಾನುಜೇ ಜ್ಯೇಷ್ಠೇ ನಂದಗೋಪಕುಲೋದ್ಭವೇ ||೬||

ಮಹಿಷಾಸೃಕ್ಪ್ರಿಯೇ ನಿತ್ಯಂ ಕೌಶಿಕೇ ಪೀತವಾಸಿನಿ ।
ಅಟ್ಟಹಾಸೇ ಕೋಕಮುಖಿ ನಮಸ್ತೇಽಸ್ತು ರಣಪ್ರಿಯೇ ||೭||

ಉಮೇ ಶಾಕಂಭ(ಬ)ರಿ ಶ್ವೇತೇ ಕೃಷ್ಣೇ ಕೈಟಭನಾಶಿನಿ ।
ಹಿರಣ್ಯಾಕ್ಷಿ ವಿರುದ್ಧಾಕ್ಷಿ ಧೂಮ್ರಾಕೃತಿ ನಮೋಽಸ್ತು ತೇ ॥೯॥

ವೇದಶ್ರುತೇ ಮಹಾಪುಣ್ಯೇ ಬ್ರಹ್ಮಣ್ಯೇ ಜಾತವೇದಸಿ ।
ಜಂಬೂಕಟಕಚೈತ್ಯೇಷು ನಿತ್ಯಂ ಸನ್ನಿಹಿತಾಲಯೇ ॥೧೦॥

ತ್ವಂ ಬ್ರಹ್ಮವಿದ್ಯಾ ವಿದ್ಯಾನಾಂ ಮಹಾನಿದ್ರಾ ಚ ದೇಹಿನಾಮ್ ।
ಸ್ಕಂದಮಾತರ್ಭಗವತಿ ದುರ್ಗೇ ಕಾಂತಾರವಾಸಿನಿ ॥೧೧॥

ಸ್ವಾಹಾಕಾರಾ ಸ್ವಧಾ ಚೈವ ಕಲಾ ಕಾಷ್ಠಾ ಸರಸ್ವತೀ ।
ಸಾವಿತ್ರೀ ವೇದಮಾತಾ ಚ ತಥಾ ವೇದಾಂಗಮುಚ್ಯತೇ ॥೧೨॥

ಸ್ತುತಾಽಸಿ ತ್ವಂ ಮಹಾದೇವಿ ವಿಶುದ್ಧೇನಾಂತರಾತ್ಮನಾ ।
ಜಯೋ ಭವತು ಮೇ ನಿತ್ಯಂ ತ್ವತ್ಪ್ರಸಾದಾದ್ರಣೇ ರಣೇ ॥೧೩॥

ಕಾಂತಾರಭಯದುರ್ಗೇಷು ಭಕ್ತಾನಾಂ ಪಾಲನೇಽಪಿ ಚ ।
ನಿತ್ಯಂ ವಸಸಿ ಪಾತಾಲೇ ಯುದ್ಧೇ ಜಯಸಿ ದಾನವಾನ್ ॥೧೪॥

ತುಷ್ಟಿಃ ಪುಷ್ಟಿರ್ಧೃತಿಃ ಶಾಂತಿಶ್ಚಂದ್ರಾಽದಿತ್ಯವಪುರ್ಧರಾ ।
ಭೂತಿರ್ಭೂತಿಮತಾಂ ಮುಖ್ಯೇ ವೀಕ್ಷ್ಯಸೇ ಸಿದ್ಧಚಾರಣೈಃ ॥೧೫॥

ದೇವ್ಯುವಾಚ ॥ ಸ್ವಲ್ಪೇನೈವ ತು ಕಾಲೇನ ಶತ್ರೂಞ್ಜಯಸಿ ಪಾಂಡವ ।
ನರಸ್ತ್ವಮಸಿ ದುರ್ಧರ್ಷೋ ನಾರಾಯಣಸಹಾಯವಾನ್ ॥೧೬॥

ಅಜೇಯಸ್ತ್ವಂ ರಣೇಽರೀಣಾಮಸಿ ವಜ್ರಭೃತಾ ಸ್ವಯಮ್ ।
ಇತ್ಯೇವಮುಕ್ತ್ವಾ ವರದಾ ಕ್ಷಣೇನಾಂತರಧೀಯತ ॥೧೭॥

ಲಬ್ಧ್ವಾ ವರಂ ತು ಕೌಂತೇಯೋ ಮೇನೇ ವಿಜಯಮಾತ್ಮನಃ ।
ಆರುರೋಹ ತಥಾ ಪಾರ್ಥೋ ರಥಂ ಪರಮಸತ್ತಮಮ್ ॥೧೮॥

ಕೃಷ್ಣಾರ್ಜುನಾವೇಕರಥೌ ದಿವ್ಯೌ ಶಂಖೌ ಪ್ರದಧ್ಮತುಃ ।
ಯ ಇದಂ ಪಠತೇ ಸ್ತೋತ್ರಂ ಕಾಲ್ಯ ಉತ್ಥಾಯ ಮಾನವಃ ॥೧೯॥

ಯಕ್ಷರಕ್ಷಃಪಿಶಾಚೇಭ್ಯೋ ನ ಭಯಂ ವಿದ್ಯತೇ ಸದಾ ।
ತಥಾಽಪಿ ಚೋರಶಸ್ತ್ರೇಭ್ಯಃ ಸರ್ಪೇಭ್ಯೋ ಯಚ್ಚ ದಂಷ್ಟ್ರಿಣಃ ॥೨೦॥

ನ ಭಯಂ ವಿದ್ಯತೇ ತಸ್ಯ ಸದಾ ರಾಜಕುಲಾದಪಿ ।
ವಿವಾದೇ ಜಯಮಾಪ್ನೋತಿ ಬದ್ಧೋ ಮುಚ್ಯೇತ ಬಂಧನಾತ್ ॥೨೧॥

ದುರ್ಗಂ ತರತಿ ಚಾವಶ್ಯಂ ಸದಾ ರೋಗೈರ್ವಿಮುಚ್ಯತೇ ।

ಸಂಗ್ರಾಮೇ ವಿಜಯೀ ನಿತ್ಯಂ ಲಕ್ಷ್ಮೀಂ ಪ್ರಾಪ್ನೋತಿ ಕೇವಲಾಮ್ ।೨೨।

ಆರೋಗ್ಯಬಲಸಂಪನ್ನೋ ಜೀವೇದ್ವರ್ಷಶತಂ ತಥಾ ।
ಏತದ್ದೃಷ್ಟಂ ಶ್ರುತಂ ರಾಜನ್ ಮಯಾ ವ್ಯಾಸೇನ ಧೀಮತಾ ॥೨೩ ॥

॥ ಇತಿ ಶ್ರೀಮನ್ಮಹಾಭಾರತೇ ಭೀಷ್ಮಪರ್ವಣಿ ಅರ್ಜುನಕೃತಾ
ದುರ್ಗಾಸ್ತುತಿಃ ಸಂಪೂರ್ಣಾ ॥

---

## ವೈದಿಕ ದುರ್ಗಾಮಂತ್ರ

ಜಾತವೇದಸೇ ಸುನವಾಮ ಸೋಮಮರಾತೀಯತೋ ನಿದಹಾತಿ ವೇದಃ । ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ॥

# ಹನೂಮತ್‌ಸ್ತೋತ್ರಮ್

ಅಕ್ಷಾದಿರಾಕ್ಷಸಹರಂ ದಶಕಂಠದರ್ಪನಿರ್ಮೂಲನಂ
ರಘುವರಾಂಘ್ರಿಸರೋಜಭಕ್ತಮ್ ।
ಸೀತಾವಿಷಹ್ಯಘನದುಃಖನಿವಾರಕಂ ತಂ
ವಾಯೋಃ ಸುತಂ ಗಿಲಿತಭಾನುಮಹಂ ನಮಾಮಿ ॥೧॥

ಮಾಂ ಪಶ್ಯ ಪಶ್ಯ ದಯಯಾ ನಿಜದೃಷ್ಟಿಪಾತೈರ್ಮಾಂ
ರಕ್ಷ ರಕ್ಷ ಪರಿತೋ ರಿಪುದುಃಖಪುಂಜಾತ್ ।
ವಶ್ಯಂ ಕುರು ತ್ರಿಜಗತಾಂ ವಸುಧಾಧಿಪಾನಾಂ
ಮೇ ದೇಹಿ ದೇಹಿ ಮಹತೀಂ ವಸುಧಾಶ್ರಿಯಂ ಚ ॥೨॥

ಆಪದ್ಭ್ಯೋ ರಕ್ಷ ಸರ್ವತ್ರ ಆಂಜನೇಯ ನಮೋಽಸ್ತು ತೇ ।
ಬಂಧನಂ ಛೇದಯಾಭುಕ್ತಕಪಿವರ್ಯ ನಮೋಽಸ್ತು ತೇ ॥೩॥

ದೇಹಿ ಮೇ ಸಂಪದೋ ನಿತ್ಯಂ ತ್ರಿಲೋಚನ ನಮೋಽಸ್ತು ತೇ ॥೪॥

ಉಚ್ಚಾಟಯ ರಿಪೂನ್ ಸರ್ವಾನ್ಮೋಹನಂ ಕುರು ಭೂಭುಜಾಮ್ ।
ವಿದ್ವೇಷಿಣೋ ಮಾರಯ ತ್ವಂ ತ್ರಿಮೂರ್ತ್ಯಾತ್ಮಕ ಸರ್ವದಾ ॥೫॥

ಸಂಜೀವಪರ್ವತೋದ್ಧಾರ ಮಮ ದುಃಖಂ ನಿವಾರಯ ।
ಘೋರಾನುಪದ್ರವಾನ್ಸರ್ವಾನ್ ನಾಶಯಾಕ್ಷಾಸುರಾಂತಕ ॥೬॥

ಏವಂ ಸ್ತುತ್ವಾ ಹನೂಮಂತಂ ನರಃ ಶ್ರದ್ಧಾಸಮನ್ವಿತಃ ।
ಪುತ್ರಪೌತ್ರಾದಿಸಹಿತಃ ಸರ್ವಾನ್ ಕಾಮಾನವಾಪ್ನುಯಾತ್ ॥೭॥

ಮರ್ಕಟೇಶ ಮಹೋತ್ಸಾಹ ಸರ್ವಶೋಕವಿನಾಶಕ ।
ಶತ್ರೂನ್ ಸಂಹರ ಮಾಂ ರಕ್ಷ ಶ್ರಿಯಂ ದತ್ವಾ ಚ ಮಾಂ ಭರ ॥೮॥

॥ ಇತಿ ಹನೂಮತ್‌ಸ್ತೋತ್ರಂ ಸಂಪೂರ್ಣಮ್ ॥

## ಭೀಮದ್ವಾದಶನಾಮಸ್ತೋತ್ರಮ್

ಮಾರುತಿಃ ಪಾಂಡವೋ ಭೀಮೋ ಗದಾಪಾಣಿರ್ವೃಕೋದರಃ ।
ಕೌಂತೇಯಃ ಕೃಷ್ಣದೂತಶ್ಚ ಭೀಮಸೇನೋ ಮಹಾಬಲಃ ॥೧॥

ಜರಾಸಂಧಾಂತಕೋ ವೀರೋ ದುಃಶಾಸನವಿನಾಶಕಃ ।
ದ್ವಾದಶೈತಾನಿ ನಾಮಾನಿ ಭೀಮಸ್ಯ ನಿಯತಂ ಪಠನ್ ।
ಆಯುರಾರೋಗ್ಯಸಂಪತ್ತಿಮರಿಪಕ್ಷಕ್ಷಯಂ ಲಭೇತ್ ॥೨॥

॥ ಇತಿ ಭೀಮದ್ವಾದಶನಾಮಸ್ತೋತ್ರಂ ಸಂಪೂರ್ಣಮ್ ॥

## ಮೃತ್ಯುಂಜಯಸ್ತೋತ್ರಮ್

ರುದ್ರಂ ಪಶುಪತಿಂ ಸ್ಥಾಣುಂ ನೀಲಕಂಠಮುಮಾಪತಿಮ್ ।
ನಮಾಮಿ ಶಿರಸಾ ದೇವಿ ಕಿಂ ನೋ ಮೃತ್ಯುಃ ಕರಿಷ್ಯತಿ ॥೧॥

ಅನಂತಮಕ್ಷಯಂ ಶಾಂತಂ ಅಕ್ಷಮಾಲಾಧರಂ ಹರಮ್ ।
ನೀಲಕಂಠಂ ವಿರೂಪಾಕ್ಷಂ ನಿರ್ಮಲಂ ನಿರುಪದ್ರವಮ್ ॥೨॥

ಅನಾದಿನಿಧನಂ ದೇವಂ ವಿಶ್ವವ್ಯಾಪಿನಮೀಶ್ವರಮ್ ।
ಆನಂದಪರಮಂ ನಿತ್ಯಂ ಕೈವಲ್ಯಪದಕಾರಣಮ್ ॥೩।

ಕಾಲಕಂಠಂ ಕಲಾಮೂರ್ತಿಂ ಕಾಲಾಗ್ನಿ ಕಾಲನಾಶನಮ್ ।
ಸ್ವರ್ಗಾಪವರ್ಗದಾತಾರಂ ಸೃಷ್ಟಿಸ್ಥಿತ್ಯಂತಕಾರಣಮ್ ।
ಭಸ್ಮೋದ್ಧೂಳಿತ ಸರ್ವಾಂಗಂ ನಾನಾಭರಣಭೂಷಿತಮ್ ॥೪॥

ಮಾರ್ಕಂಡೇಯಮಿದಂ ಸ್ತೋತ್ರಂ ಯಃ ಪಠೇಚ್ಛಿವಸನ್ನಿಧೌ ।
ತಸ್ಯ ಮೃತ್ಯುಭಯಂ ನಾಸ್ತಿ ಸತ್ಯಂ ಸತ್ಯಂ ವದಾಮ್ಯಹಮ್ ॥೫॥

॥ ಇತಿ ಶ್ರೀಮಾರ್ಕಂಡೇಯಪುರಾಣೇ ತುಂಗಭದ್ರಾಕಾಂಡೇ
ಮೃತ್ಯುಂಜಯಸ್ತೋತ್ರಂ ಸಂಪೂರ್ಣಮ್ ॥

# ಸುಬ್ರಹ್ಮಣ್ಯಸ್ತುತಿಃ

ಯುಧಿಷ್ಠಿರ ಉವಾಚ॥

ಭಗವಾನ್ ಶ್ರೋತುಮಿಚ್ಛಾಮಿ ನಾಮಾನಿ ಚ ಮಹಾತ್ಮನಃ ।
ತ್ರಿಷು ಲೋಕೇಷು ಯಾನ್ಯಸ್ಯ ವಿಖ್ಯಾತಾನಿ ದ್ವಿಜೋತ್ತಮಃ ॥೧॥

ವೈಶಂಪಾಯನ ಉವಾಚ ॥

ಇತ್ಯುಕ್ತಃ ಪಾಂಡವೇಯೇನ ಮಹಾತ್ಮಾ ಋಷಿಸನ್ನಿಧೌ ।
ಉವಾಚ ಭಗವಾಂಸ್ತತ್ರ ಮಾರ್ಕಂಡೇಯೋ ಮಹಾತಪಾಃ ॥೨॥

ಆಗ್ನೇಯಶ್ಚೈವ ಸ್ಕಂದಶ್ಚ ದೀಪ್ತಕೀರ್ತಿರನಾಮಯಃ ।
ಮಯೂರಕೇತುರ್ಧರ್ಮಾತ್ಮಾ ಭೂತೇಶೋ ಮಹಿಷಾರ್ದನ ॥೩॥

ಕಾಮಜಿತ್ಕಾಮದಃ ಕಾಂತಃ ಸತ್ಯವಾಗ್ಭುವನೇಶ್ವರಃ ।
ಶಿಶುಃ ಶೀಘ್ರಃ ಶುಚಿಶ್ಚಂಡೋ ದೀಪ್ತವರ್ಣಃ ಶುಭಾನನಃ ॥೪॥

ಅಮೋಘಸ್ತ್ವನಘೋ ರೌದ್ರಃ ಪ್ರಿಯಶ್ಚಂದ್ರಾನನಸ್ತಥಾ ।
ದೀಪ್ತಶಕ್ತಿಃ ಪಶಾಂತಾತ್ಮಾ ಭದ್ರಕುಕ್ಕುಟಮೋಹನಃ ॥೫॥

ಷಷ್ಠೀಪ್ರಿಯಶ್ಚ ಧರ್ಮಾತ್ಮಾ ಪವಿತ್ರೋ ಮಾತೃವತ್ಸಲಃ ।
ಕನ್ಯಾಭರ್ತಾ ವಿಭಕ್ತಶ್ಚ ಸ್ವಾಹೇಯೋ ದೇವಕೀಸುತಃ ॥೬॥

ಪ್ರಭುರ್ನೇತಾ ವಿಶಾಖಶ್ಚ ನೈಗಮೇಯಃ ಸುದುಶ್ಚರ ।
ಸುವ್ರತೋ ಲಲಿತಶ್ಚೈವ ಬಾಲಕ್ರೀಡನಕಪ್ರಿಯಃ ॥೭॥

ಖಚಾರೀ ಬ್ರಹ್ಮಚಾರೀ ಚ ಶೂರಃ ಶರವಣೋದ್ಭವಃ ।
ವಿಶ್ವಾಮಿತ್ರಪ್ರಿಯಶ್ಚೈವ ಪ್ರಿಯಃ ಪ್ರಿಯಕೃದೇವ ತು ॥೮॥

ನಾಮಾನ್ಯೇತಾನಿ ದಿವ್ಯಾನಿ ಕಾರ್ತ್ತಿಕೇಯಸ್ಯ ಯಃ ಪಠೇತ್ ।
ಸ್ವರ್ಗಂ ಕೀರ್ತಿಂ ಧನಂ ಚೈವ ಸ ಲಭೇನ್ನಾತ್ರ ಸಂಶಯಃ ॥೯॥

ಮಾರ್ಕಂಡೇಯ ಉವಾಚ ॥

ಸ್ತೋಷ್ಯಾಮಿ ದೇವೈರ್ಋಷಿಭಿಶ್ಚ ಜುಷ್ಟಂ
ಶಕ್ತ್ಯಾ ಗುಹಂ ನಾಮಭಿರಪ್ರಮೇಯಮ್ ।
ಷಡಾನನಂ ಶಕ್ತಿದಂ ಸುವೀರಂ ನಿಬೋಧ ಚೈತಾನಿ ಕುರುಪ್ರವೀರ ೧೦

ಬ್ರಹ್ಮಣ್ಯೋ ವೈ ಬ್ರಹ್ಮಜೋ ಬ್ರಹ್ಮವಿಚ್ಚ
ಬ್ರಹ್ಮೇಶಯೋ ಬ್ರಹ್ಮವತಾಂ ವರಿಷ್ಠಃ ।
ಬ್ರಹ್ಮಪ್ರಿಯೋ ಬ್ರಾಹ್ಮಣಸರ್ವಮಂತ್ರೀ
ತ್ವಂ ಬ್ರಹ್ಮಣಾಂ ಬ್ರಾಹ್ಮಣಾನಾಂ ಚ ನೇತಾ ॥೧೧॥

ಸ್ವಾಹಾ ಸ್ವಧಾ ತ್ವಂ ಪರಮಂ ಪವಿತ್ರಂ
ಮಂತ್ರಸ್ತುತಸ್ತ್ವಂ ಪ್ರಥಿತಃ ಷಡರ್ಚಿಃ ।
ಸಂವತ್ಸರಸ್ತ್ವಮೃತಪಚ್ಚ ಷಡ್ವೈ
ಮಾಸಾರ್ಧಮಾಸಾಶ್ಚ ದಿನಂ ದಿನಶ್ಚ ॥೧೨॥

ತ್ವಂ ಪುಷ್ಕರಾಕ್ಷಸ್ತ್ವರವಿಂದವಕ್ತ್ರ
ಸಹಸ್ರಚಕ್ಷೋಽಸಿ ಸಹಸ್ರಬಾಹುಃ ।
ತ್ವಂ ಲೋಕಪಾಲಃ ಪರಮಂ ಹವಿಶ್ಚ
ತ್ವಂ ಭಾವನಃ ಸರ್ವಸುರಾಸುರಾಣಾಮ್ ॥೧೩॥

ತ್ವಮೇವ ಸೇನಾಧಿಪತಿಃ ಪ್ರಚಂಡಃ
ಪ್ರಭುರ್ವಿಭಾಶ್ಚಾಪ್ಯಥ ಶಕ್ರಜೇತಾ ।
ಸಹಸ್ರಪಾತ್ತ್ವಂ ಧರಣಿ ತ್ವಮೇವ
ಸಹಸ್ರತುಷ್ಟಿಶ್ಚ ಸಹಸ್ರಭುಕ್ ಚ ॥೧೪॥

ಸಹಸ್ರಶೀರ್ಷಸ್ತ್ವಮನಂತರೂಪಃ
ಸಹಸ್ರಪಾತ್ತ್ವಂ ದಶಶಕ್ತಿಧಾರೀ ।
ಗಂಗಾಸುತಸ್ತ್ವಂ ಸ್ವಮತೇನ ದೇವ
ಸ್ವಾಹಾಮಹೀಕೃತ್ತಿಕಾನಾಂ ತಥೈವ ॥೧೫॥

ತ್ವಂ ಕ್ರೀಡಸೇ ಷಣ್ಮುಖ ಕುಕ್ಕುಟೇನ
ಯಥೇಷ್ಟನಾನಾವಿಧಕಾಮರೂಪೀ
ದೀಕ್ಷಾಽಸಿ ಸೋಮೋ ಮರುತಃ ಸದೈವ
ಧರ್ಮೋಽಸಿ ವಾಯುರಚಲೇಂದ್ರ ಇಂದ್ರಃ ॥೧೬॥

ಸನಾತನಾನಾಮಪಿ ಶಾಶ್ವತಸ್ತ್ವಂ
ಪ್ರಭುಃ ಪ್ರಭೂಣಾಮಪಿ ಚೋಗ್ರಧನ್ವಾ।
ಋತಸ್ಯ ಕರ್ತಾ ದಿತಿಜಾಂತಕಸ್ತ್ವಂ
ಜೇತಾ ರಿಪೂಣಾಂ ಪ್ರವರಃ ಸುರಾಣಾಮ್ ॥೧೭॥

ಸೂಕ್ಷ್ಮಂ ತಪಸ್ತತ್ಪರಮಂ ತ್ವಮೇವ
ಪರಾವರಜ್ಞೋಽಸಿ ಪರಾವರಸ್ತ್ವಮ್ ।
ಧರ್ಮಸ್ಯ ಕಾಮಸ್ಯ ಪರಸ್ಯ ಚೈವ
ತ್ವತ್ತೇಜಸಾ ಕೃತ್ಸ್ನಮಿದಂ ಮಹಾತ್ಮನ್ ॥೧೮॥

ವ್ಯಾಪ್ತಂ ಜಗತ್ಸರ್ವಸುರಪ್ರವೀರ ಶಕ್ತ್ಯಾ
ಮಯಾ ಸಂಸ್ತುತ ಲೋಕನಾಥ ।
ನಮೋಽಸ್ತು ತೇ ದ್ವಾದಶನೇತ್ರಬಾಹೋ
ಅತಃ ಪರಂ ವೇದ್ಮಿ ಗತಿಂ ನ ತೇಽಹಮ್ ॥೧೯॥

ಸ್ಕಂದಸ್ಯ ಯ ಇದಂ ವಿಪ್ರಃ ಪಠೇಜ್ಜನ್ಮ ಸಮಾಹಿತಃ ।
ಶ್ರಾವಯೇದ್ಬ್ರಾಹ್ಮಣೇಭ್ಯೋ ಯಃ ಶೃಣುಯಾದ್ವಾ ದ್ವಿಜೇರಿತಮ್ ೨೦॥

ಧನಮಾಯುರ್ಯಶೋ ದೀಪ್ತಂ ಪುತ್ರಾನ್ ಶತ್ರುಜಯಂ ತಥಾ ।
ಸ ಪುಷ್ಟಿತುಷ್ಟೀ ಸಂಪ್ರಾಪ್ಯ ಸ್ಕಂದಸಾಲೋಕ್ಯಮಾಪ್ನುಯಾತ್ ॥೨೧॥

॥ ಇತಿ ಶ್ರೀಮನ್ಮಹಾಭಾರತೇಽರಣ್ಯಪರ್ವಣಿ
ಮಾರ್ಕಂಡೇಯಸಮಾಖ್ಯಾಪರ್ವಣಿ ಸ್ಕಂದಸ್ತುತಿರ್ನಾಮ
ತ್ರಯಸ್ತ್ರಿಂಶದಧಿಕದ್ವಿಶತತಮೋಽಧ್ಯಾಯೇ ಸುಬ್ರಹ್ಮಣ್ಯಸ್ತುತಿಃ
ಸಂಪೂರ್ಣಾ ॥

# ಸೂರ್ಯಕವಚಸ್ತೋತ್ರಮ್

ಯಾಜ್ಞವಲ್ಕ್ಯ ಉವಾಚ॥

ಶೃಣುಷ್ವ ಮುನಿಶಾರ್ದೂಲ ಸೂರ್ಯಸ್ಯ ಕವಚಂ ಶುಭಮ್ ।
ಶರೀರಾರೋಗ್ಯದಂ ದಿವ್ಯಂ ಸರ್ವಸೌಭಾಗ್ಯದಾಯಕಮ್ ॥೧॥

ದೇದೀಪ್ಯಮಾನಮುಕುಟಂ ಸ್ಫುರನ್ಮಕರಕುಂಡಲಮ್ ।
ಧ್ಯಾತ್ವಾ ಸಹಸ್ರಕಿರಣಂ ಸ್ತೋತ್ರಮೇತದುದೀರಯೇತ್ ॥೨॥

ಶಿರೋ ಮೇ ಭಾಸ್ಕರಃ ಪಾತು ಲಲಾಟಂ ಮೇಽಮಿತದ್ಯುತಿಃ ।
ನೇತ್ರೇ ದಿನಮಣಿಃ ಪಾತು ಶ್ರವಣೇ ವಾಸರೇಶ್ವರಃ ॥೩॥

ಘ್ರಾಣಂ ಘರ್ಮಘೃಣಿಃ ಪಾತು ವದನಂ ವೇದವಾಹನಃ ।
ಜಿಹ್ವಾಂ ಮೇ ಮಾನದಃ ಪಾತು ಕಂಠಂ ಮೇ ಸುರವಂದಿತಃ ॥೪॥

ಸ್ಕಂಧೌ ಪ್ರಭಾಕರಃ ಪಾತು ವಕ್ಷಃ ಪಾತು ಜನಪ್ರಿಯಃ ।
ಪಾತು ಪಾದೌ ದ್ವಾದಶಾತ್ಮಾ ಸರ್ವಾಂಗಂ ಸಕಲೇಶ್ವರಃ ॥೫॥

ಸೂರ್ಯರಕ್ಷಾತ್ಮಕಂ ಸ್ತೋತ್ರಂ ಲಿಖಿತ್ವಾ ಭೂರ್ಜಪತ್ರಕೇ ।
ದದಾತಿ ಯಃ ಕರೇ ತಸ್ಯ ವಶಗಾಃ ಸರ್ವಸಿದ್ಧಯಃ ॥೬॥

ಸುಸ್ನಾತೋ ಯೋ ಜಪೇತ್ ಸಮ್ಯಗ್ಯೋಽಧೀತೇ ಸ್ವಸ್ಥಮಾನಸಃ ।
ಸ ರೋಗಮುಕ್ತೋ ದೀರ್ಘಾಯುಃ ಸುಖಂ ಪುಷ್ಟಿಂ ಚ ವಿಂದತಿ ॥೭॥

॥ ಇತಿ ಯಾಜ್ಞವಲ್ಕ್ಯ ವಿರಚಿತಂ ಸೂರ್ಯಕವಚಸ್ತೋತ್ರಂ
ಸಂಪೂರ್ಣಮ್ ॥

# ನವಗ್ರಹಸ್ತೋತ್ರಮ್

ಭಾಸ್ವಾನ್ಮೇ ಭಾಸಯೇತ್ತತ್ತ್ವಂ ಚಂದ್ರಶ್ಚಾऽಽಹ್ಲಾದಕೃದ್ಭವೇತ್ ।
ಮಂಗಲೋ ಮಂಗಲಂ ದದ್ಯಾದ್ಬುಧಶ್ಚ ಬುಧತಾಂ ದಿಶೇತ್ ॥೧॥

ಗುರುರ್ಮೇ ಗುರುತಾಂ ದದ್ಯಾತ್ಕವಿಶ್ಚ ಕವಿತಾಂ ದಿಶೇತ್ ।
ಶನಿಶ್ಚ ಶಂ ಪ್ರಾಪಯತು ಕೇತುಃ ಕೇತುಂ ಜಯೇऽರ್ಪಯೇತ್ ॥೨॥

ರಾಹುರ್ಮೇ ರಹಯೇದ್ರೋಗಂ ಗ್ರಹಾಃ ಸಂತು ಕರಗ್ರಹಾಃ ।
ನವಂ ನವಂ ಮಮೈಶ್ವರ್ಯಂ ದಿಶಂತ್ವೇತೇ ನವಗ್ರಹಾಃ ॥೩॥

ಶನೇ ದಿನಮಣೇಃ ಸೂನೋ ಹ್ಯನೇಕಗುಣಸನ್ಮಣೇ।
ಅರಿಷ್ಟಂ ಹರ ಮೇऽಭೀಷ್ಟಂ ಕುರು ಮಾ ಕುರು ಸಂಕಟಮ್ ॥೪॥

ಹರೇರನುಗ್ರಹಾರ್ಥಾಯ ಶತ್ರೂಣಾಂ ನಿಗ್ರಹಾಯ ಚ ।
ವಾದಿರಾಜಯತಿಪ್ರೋಕ್ತಂ ಗ್ರಹಸ್ತೋತ್ರಂ ಸದಾ ಪಠೇತ್ ॥೫॥

॥ ಇತಿ ಶ್ರೀವಾದಿರಾಜಯತಿವಿರಚಿತಂ ನವಗ್ರಹಸ್ತೋತ್ರಂ
ಸಂಪೂರ್ಣಮ್ ॥

# ನವಗ್ರಹಸ್ತೋತ್ರಮ್

ಅಸ್ಯ ಶ್ರೀನವಗ್ರಹಸ್ತೋತ್ರಮಂತ್ರಸ್ಯ ವೇದವ್ಯಾಸ ಋಷಿಃ।
ಅನುಷ್ಟುಪ್ ಛಂದಃ।
ಮಮ ಗ್ರಹಾನುಕೂಲ್ಯಾರ್ಥೇ ನವಗ್ರಹಸ್ತೋತ್ರ ಜಪೇ ವಿನಿಯೋಗಃ॥

ಜಪಾಕುಸುಮಸಂಕಾಶಂ ಕಾಶ್ಯಪೇಯಂ ಮಹಾದ್ಯುತಿಮ್।
ತಮೋಘ್ನಸರ್ವಪಾಪಘ್ನಂ ಪ್ರಣತೋಽಸ್ಮಿ ದಿವಾಕರಮ್ ॥೧॥

ದಧಿಶಂಖತುಷಾರಾಭಂ ಕ್ಷೀರೋದಾರ್ಣವಸನ್ನಿಭಮ್।
ನಮಾಮಿ ಶಶಿನಂ ದೇವಂ ಶಂಭೋರ್ಮುಕುಟಭೂಷಣಮ್ ॥೨॥

ಧರಣೀಗರ್ಭಸಂಭೂತಂ ವಿದ್ಯುತ್ತೇಜಃಸಮುದ್ಭವಮ್।
ಕುಮಾರಂ ಶಕ್ತಿಹಸ್ತಂ ಚ ಮಂಗಲಂ ಪ್ರಣಮಾಮ್ಯಹಮ್ ॥೩॥

ಪ್ರಿಯಂಗುಕಲಿಕಾಶ್ಯಾಮಂ ರೂಪೇಣಾಪ್ರತಿಮಂ ಬುಧಮ್।
ಸೌಮ್ಯಂ ಸೌಮ್ಯಗುಣೋಪೇತಂ ನಮಾಮಿ ಶಶಿನಃ ಸುತಮ್ ॥೪॥

ದೇವಾನಾಂ ಚ ಋಷೀಣಾಂ ಚ ಗುರುಂ ಕಾಂಚನಸನ್ನಿಭಮ್।
ಗುರುಂ ಚೈವ ತ್ರಿಲೋಕಸ್ಯ ತಂ ಗುರುಂ ಪ್ರಣಮಾಮ್ಯಹಮ್ ॥೫॥

ಹೇಮಕುಂಭ ಮೃಣಾಲಾಭಂ ದೈತ್ಯಾನಾಂ ಪರಮಂ ಗುರುಮ್।
ಸರ್ವಶಾಸ್ತ್ರಪ್ರವಕ್ತಾರಂ ಭಾರ್ಗವಂ ಪ್ರಣಮಾಮ್ಯಹಮ್ ॥೬॥

ನೀಲಾಂಜನಸಮಾಭಾಸಂ ರವಿಪುತ್ರಂ ಮಹಾಗ್ರಹಮ್।
ಛಾಯಾಮಾರ್ತಾಂಡಸಂಭೂತಂ ವಂದೇಽಹಂ ತಂ ಶನೈಶ್ಚರಮ್ ೭॥

ಅರ್ಧಕಾಯಂ ಮಹಾವೀರ್ಯಂ ಚಂದ್ರಾದಿತ್ಯಾದಿಮರ್ದನಮ್ ।
ಸಿಂಹಿಕಾಗರ್ಭಸಂಭೂತಂ ತಂ ರಾಹುಂ ಪ್ರಣಮಾಮ್ಯಹಮ್ ॥೮॥

ಕರಾಲದ್ಯುತಿಸಂಕಾಶಂ ತಾರಕಾಗ್ರಹಮರ್ದನಮ್ ।
ರೌದ್ರಂ ರೌದ್ರಾತ್ಮಕಂ ಘೋರಂ ತಂ ಕೇತುಂ ಪ್ರಣಮಾಮ್ಯಹಮ್ ॥

ಇದಂ ವ್ಯಾಸಮುಖೋತ್ಪನ್ನಂ ಪಠಿಷ್ಯಂತಿ ಸಮಾಹಿತಾಃ
ದಿವಾ ವಾ ಯದಿ ವಾ ರಾತ್ರೌ ತೇಷಾಂ ಶಾಂತಿರ್ಭವಿಷ್ಯತಿ ॥೧೦॥

ಐಶ್ವರ್ಯ ಮತುಲಂ ತೇಷಾಮಾರೋಗ್ಯಂ ಪುಷ್ಟಿವರ್ಧನಮ್ ।
ನರನಾರೀನೃಪಾಣಾಂ ಚ ಭವೇದ್ದುಃಸ್ವಪ್ನನಾಶನಮ್ ॥೧೧॥

ಗ್ರಹನಕ್ಷತ್ರಪೀಡಾಶ್ಚ ತಸ್ಕರಾಗ್ನಿಸಮುದ್ಭವಾಃ ।
ಸರ್ವಾಶ್ಚಾಸ್ಯ ವಿನಶ್ಯಂತಿ ವ್ಯಾಸಪ್ರೋಕ್ತಾನ್ನ ಸಂಶಯಃ ॥೧೨॥

॥ ಇತಿ ವ್ಯಾಸವಿರಚಿತಂ ನವಗ್ರಹಸ್ತೋತ್ರಂ ಸಂಪೂರ್ಣಮ್ ॥

# ಶನಿಸ್ತೋತ್ರಮ್

ಅಗಸ್ತ್ಯ ಉವಾಚ ॥

ಜನ್ಮನಿ ದ್ವಾದಶೇ ಮಂದೇ ಚತುರ್ಥನವಪಂಚಮೇ ।
ಸ್ಥಿತಃ ಶನಿಃ ಸದಾ ಕುರ್ಯಾದ್ಗ್ರಹಪೀಡಾಂ ಧನಕ್ಷಯಮ್ ॥೧॥

ಅಂಗಗ್ರಹವಿಪಾಕೇನ ದಶಾಂತರ್ದಶಸಂಧಿಷು ।
ತಸ್ಯ ಪ್ರೀತಿಕರಂ ಸ್ತೋತ್ರಂ ಸೌರಿಣಾ ಭಾಷಿತಂ ಪುರಾ ॥೨॥

ಶನಿರುವಾಚ ||

ಸ್ಥಿತಃ ಸರ್ವಗತೌ ವಾಽಪಿ ಜನ್ಮಸ್ಥಾನೇ ಗತೇಽಪಿ ವಾ ।
ಪಂಚಮೇ ದ್ವಾದಶೇ ವಾಽಪಿ ರಂಧ್ರೇ ಸಪ್ತಮಗೇ ತಥಾ ||೩||

ಮಂದವಾರೇ ವಿಶೇಷೇಣ ಸ್ತೋತ್ರಂ ಪಠತಿ ಯಃ ಪುಮಾನ್ ।
ತಸ್ಯ ಮೃತ್ಯುಭಯಂ ನಾಸ್ತಿ ಮಮ ದೋಷೋ ನ ವಿದ್ಯತೇ ||೪||

ಅಗಸ್ತ್ಯ ಉವಾಚ ||

ನಮಃ ಕೃಷ್ಣಾಯ ನೀಲಾಯ ಶಿತಿಕಂಠಪರಾಯ ಚ ।
ನಮೋ ನೀಲಮಯೂಖಾಯ ನೀಲೋತ್ಪಲನಿಭಾಯ ಚ ||೫||

ನಮಃ ಪೌರುಷಗಾತ್ರಾಯ ಸ್ಥೂಲರೋಮ್ಣೇ ನಮೋ ನಮಃ ।
ನಮೋ ಮಂದಗತೇ ತುಭ್ಯಂ ನಿಸ್ಪೃಹಾಯ ನಮೋ ನಮಃ ||೬||

ತಪಸಾ ಶುದ್ಧದೇಹಾಯ ಯೋಗಾಭ್ಯಾಸರತಾಯ ಚ ।
ನಮಸ್ತೇ ಜ್ಞಾನರೂಪಾಯ ಕಾಶ್ಯಪಾಯಾರ್ಕಸೂನವೇ ||೭||

ಶನಿರುವಾಚ ||

ಇದಂ ಸ್ತೋತ್ರಂ ಪಠೇದ್ಯಸ್ತು ಮದ್ಭಕ್ತಿಶ್ರದ್ಧಯಾಽನ್ವಿತಃ ।
ಕ್ಷಯಾಪಸ್ಮಾರಕುಷ್ಠಾದಿವ್ಯಾಧಿಭಿರ್ನಾಭಿಭೂಯತೇ ||೮||

ತಸ್ಮಾತ್ಸರ್ವಪ್ರಯತ್ನೇನ ಸ್ತೋತ್ರಂ ಯಃ ಪಠತೇ ನರಃ ।
ಸರ್ವಾನ್ ಕಾಮಾನವಾಪ್ನೋತಿ ಸತ್ಯಮೇವ ನ ಸಂಶಯಃ ||

|| ಇತಿ ಶನಿಸ್ತೋತ್ರಮ್ ||

# ಜ್ವರಹರ ಸ್ತೋತ್ರಮ್

ಶ್ರೀ ಭಗವಾನುವಾಚ-

ತ್ರಿಪಾದ್ಭಸ್ಮಪ್ರಹರಣಸ್ತ್ರಿಶಿರಾ ನವಲೋಚನಃ
ಸ ಮೇ ಪ್ರೀತಃ ಸುಖಂ ದದ್ಯಾತ್ಸರ್ವಾಮಯ ಪತಿಜ್ವರಃ ||

ಆದ್ಯಂತವಂತಃ ಕವಯಃ ಪುರಾಣಾಃ
ಸೂಕ್ಷ್ಮಾ ಬೃಹಂತೋಽಪ್ಯನುಶಾಸಿತಾರಃ
ಸರ್ವಾನ್ ಜ್ವರಾನ್ ಘ್ನಂತು ಮಮಾನಿರುದ್ಧ
ಪ್ರದ್ಯುಮ್ನ ಸಂಕರ್ಷಣ ವಾಸುದೇವಾಃ ||

ವೈಶಂಪಾಯನ ಉವಾಚ-

ಏವಮುಕ್ತಸ್ತು ಕೃಷ್ಣೇನ ಜ್ವರಃ ಸಾಕ್ಷಾನ್ಮಹಾತ್ಮನಾ
ಪ್ರೋವಾಚ ಯದುಶಾರ್ದೂಲಮೇವಮೇತದ್ಭವಿಷ್ಯತಿ ||
ವರಂ ಲಬ್ಧ್ವಾ ಜ್ವರೋ ಹೃಷ್ಟಃ ಕೃಷ್ಣಾಚ ಸಮಯಂ ಪುನಃ |
ಪ್ರಣಮ್ಯ ಶಿರಸಾ ಕೃಷ್ಣಮಪಕ್ರಾಂತಸ್ತತೋ ರಣಾತ್ ||

ಇತಿ ಶ್ರೀಮಹಾಭಾರತೇ ಖಿಲೇಷು ಹರಿವಂಶೇ ವಿಷ್ಣುಪರ್ವಣಿ
ಜ್ವರಕೃಷ್ಣಸಂವಾದೋ ನಾಮ ತ್ರಯೋವಿಂಶತ್ಯಧಿ
ಕಶತತಮೋಽಧ್ಯಾಯಃ

|| ಶ್ರೀಕೃಷ್ಣಾರ್ಪಣಮಸ್ತು ||

# ಮಹಾಭಾರತದಲ್ಲಿ ಅಶ್ವಿನೀ ಸ್ತೋತ್ರಮ್

ಪ್ರಪೂರ್ವಗೌ ಪೂರ್ವಜೌ ಚಿತ್ರಭಾನೂ
ಗಿರಾ ವಾಂ ಶಂಸಾಮಿ ತಪಸಾ ಹ್ಯನಂತೌ ।
ದಿವ್ಯೌ ಸುಪರ್ಣೌ ವಿರಜೌ ವಿಮಾನಾ-
ವಧಿಕ್ಷಿಪಂತೌ ಭುವನಾನಿ ವಿಶ್ವಾ ॥

ಹಿರಣ್ಮಯೌ ಶಕುನೀ ಸಾಂಪರಾಯೌ
ನಾಸತ್ಯದಸ್ರೌ ಸುನಸೌ ವೈಜಯಂತೌ ।
ಶುಕ್ಲಂ ವಯಂತೌ ತರಸಾ ಸುವೇಮಾ-
ವಧಿವ್ಯಯಂತಾವಸಿತಂ ವಿವಸ್ವತಃ ॥

ಗ್ರಸ್ತಾಂ ಸುಪರ್ಣಸ್ಯ ಬಲೇನ ವರ್ತಿಕಾ-
ಮಮುಂಚತಾಮಶ್ವಿನೌ ಸೌಭಗಾಯ ।
ತಾವತ್ಸುವೃತ್ತಾವನಮಂ ತಮಾಯ ಯಾ-
ವಸತ್ತಮಾ ಗಾ ಅರುಣಾ ಉದಾವಹತ್ ॥

ಷಷ್ಟಿಶ್ಚ ಗಾವಸ್ತ್ರಿಶತಾಶ್ಚ ಧೇನವ
ಏಕಂ ವತ್ಸಂ ಸುವತೇ ತಂ ದುಹಂತಿ ।
ನಾನಾಗೋಷ್ಠಾ ವಿಹಿತಾ ಏಕದೋಹನಾ-
ಸ್ತಾವಶ್ವಿನೌ ದುಹತೋ ಘರ್ಮಮುಕ್ಥ್ಯಮ್ ॥

ಏಕಾಂ ನಾಭಿಂ ಸಪ್ತ ಶತಾ ಅರಾಃ ಶ್ರಿತಾಃ
ಪ್ರಧಿಷ್ವನ್ಯಾ ವಿಂಶತಿರರ್ಪಿತಾ ಅರಾಃ ।

ಅನೇಮಿ ಚಕ್ರಂ ಪರಿವರ್ತತೇಽಜರಂ
ಮಾಯಾಽಶ್ವಿನೌ ಮುಂಚತೋ ಮಾ ವಿಸೀದತಮ್ ॥

ಅಶ್ವಿನಾವಿಂದುಮಮೃತಂ ವೃತ್ತಭೂಯೌ
ತಿರೋಧತ್ತಾಮಶ್ವಿನೌ ದಾಸಪತ್ನೀ
ಹಿತ್ವಾ ಗಿರಿಮಶ್ವಿನೌ ಗಾಮುದಾಚರಂತೌ
ತ್ವದ್ವೃಷ್ಟಿಮಹ್ನಾತ್ ಪ್ರಸ್ಥಿತಾ ಬಲಸ್ಯ ॥

ಯುವಾಂ ದಿಶೋ ಜನಯಥೋ ದಶಾಗ್ರೇ
ಸಮಾನಂ ಮೂರ್ಧ್ನಿ ರಥಯಾನಂ ವಿಯಂತಿ ।
ತಾಸಾಂ ಯಾತಮೃಷಯೋಽನುಪ್ರಯಾಂತಿ
ದೇವಾಃ ಮನುಷ್ಯಾಃ ಕ್ಷಿತಿಮಾಚರಂತಿ ॥

ಯುವಾಂ ವರ್ಣಾನ್ ವಿಕುರುಥೋ ವಿಶ್ವರೂಪಾಂ-
ಸ್ತೇಽಧಿಕ್ಷೀಯಂತೇ ಭುವನಾನಿ ವಿಶ್ವಾ ।
ತೇ ಭಾನುವೋಽಪ್ಯನುಸೃತಾಶ್ಚರಂತಿ
ದೇವಾ ಮನುಷ್ಯಾಃ ಕ್ಷಿತಿಮಾಚರಂತಿ ॥

ತೌ ನಾಸತ್ಯಾವಶ್ವಿನೌ ವಾಂ ಮಹೇಽಹಂ
ಸ್ರಜಂ ಚ ಯಾಂ ಬಿಭೃಥಃ ಪುಷ್ಕರಸ್ಯ ।
ತೌ ನಾಸತ್ಯಾವಮೃತಾವೃತಾವೃಧಾ-
ವೃತೇ ದೇವಸ್ತತ್ಪ್ರಪದೇ ನ ಸೂತೇ ॥

ಮುಖೇನ ಗರ್ಭಂ ಲಭತಾಂ ಯುವಾನೌ
ಗತಾಸುರೇತತ್ ಪ್ರಪದೇನ ಸೂತೇ ।

ಸದ್ಯೋ ಜಾತೋ ಮಾತರಮತ್ತಿ ಗರ್ಭ-
ಸ್ತಾವಶ್ವಿನೌ ಮುಂಚಥೋ ಜೀವಸೇ ಗಾಮ್ ॥

ಸ್ತೋತುಂ ನ ಶಕ್ನೋಮಿ ಗುಣೈರ್ಭವಂತೌ
ಚಕ್ಷುರ್ವಿಹೀನಃ ಪಥಿ ಸಂಪ್ರಮೋಹಃ ।
ದುರ್ಗೇಽಹಮಸ್ಮಿನ್ ಪತಿತೋಽಸ್ಮಿ ಕೂಪೇ
ಯುವಾಂ ಶರಣ್ಯೌ ಶರಣಂ ಪ್ರಪದ್ಯೇ ॥

(ಮ.ಭಾ.ಆದಿ.೩-೫೭-೭೮)

# ಧರ್ಮರಾಜ ಸ್ತೋತ್ರಮ್

ಬ್ರಹ್ಮಶರ್ಮಾ ಉವಾಚ

ಧರ್ಮರಾಜ ನಮಸ್ತೇಸ್ತು ಸಾಕ್ಷಾದ್ಧರ್ಮಸ್ವರೂಪಿಣೇ ।
ಧರ್ಮಿಷ್ಠ ಶಾಂತರೂಪಾಯ ಸತ್ಯರೂಪ ನಮೋಽಸ್ತು ತೇ ॥

ಯಮಾಯ ಮೃತ್ಯವೇ ತುಭ್ಯಂ ಕಾಲಾಯ ಚ ನಮೋ ನಮಃ ।
ಸೂರ್ಯಪುತ್ರ ನಮಸ್ತೇಽಸ್ತು ಸರ್ವಭೂತಕ್ಷಯಾಯ ತೇ ॥

ಸಾಧೂನಾಂ ಪಿತೃತುಲ್ಯಾಯ ವಚನಾಮೃತದಾಯಿನೇ ।
ಕಟಕಾಂಗದಕೇಯೂರಹಾರನೂಪುರಧಾರಿಣೇ ॥

ದೂರಾದೇವ ಸತೋ ದೃಷ್ಟ್ವಾ ನಿಜಾಚಾರಪರಿಪ್ಲುತಾನ್ ।
ಅರ್ಚತೇ ಗಂಧಪುಷ್ಪಾದ್ಯೈಃ ಪ್ರತ್ಯುತ್ಥಾನಾಸನಾರ್ಹಣೈಃ ॥

ಮಧ್ಯಸ್ಥಾಯ ನಮಸ್ತುಭ್ಯಂ ತತ್ತ್ವಜ್ಞಾಯ ನಮೋ ನಮಃ ।
ದದತೇ ನಿಜಸರ್ವಸ್ವಂ ಸಾಧೂನಾಂ ಸಮದರ್ಶಿನಾಮ್ ॥
ದೇವದೇವ ನಮಸ್ತುಭ್ಯಂ ವೇದವೇದಾಂತವೇದಿನೇ ।
ಸುಕೃತಂ ಸ್ವಕೃತಂ ಪೂರ್ವಂ ಜಾತಂ ಪಾಥೇಯಮದ್ಯ ವಃ ॥
ಸ್ವರ್ಲೋಕಾನ್ ಗಚ್ಛತ ಕ್ಷಿಪ್ರಮಿತಿ ಸಂಪ್ರಿಯವಾದಿನೇ ।
ನಮಸ್ತೇ ಪಿತೃರೂಪಾಯ ಭಕ್ತಾನಾಮಭಯಂಕರ ॥
ಕಮಲಾಕಾಂತಭಕ್ತಾಯ ಕಮಲೋದರಚಕ್ಷುಷೇ ।
ಕಮಲೋದ್ಭವ ಭವ್ಯಾಯ ಕಮಲಾಭಾಸಕತ್ವಿಷೇ ॥
ನಮೋ ಲಾವಣ್ಯ ನಿಧಯೇ ಕಾರುಣ್ಯವದನಾಲಯ ।
ಪಾಪಿನಾಂ ಘೋರರೂಪಾಯ ಗರ್ಜತೇ ದುರ್ಜನಾಗ್ರತಃ ॥
ದಂಷ್ಟ್ರಾಕರಾಳಭೃಕುಟೀಭೀಷಣಾನನ ತೇ ನಮಃ ॥
ಊರ್ಧ್ವರೋಮ್ಣೇ ಮಹಾರೋಮ್ಣೇ
ದೀರ್ಘರೋಮ್ಣೇ ನಮೋ ನಮಃ ॥
ಘಂಟಾರವಮಹಾಚಂಡ ಕಾಲದಂಡಾಯ ಚಂಡಿನೇ ।
ದಂಡ್ಯಾನ್ ದಂಡಯತೇ ನಿತ್ಯಮುಗ್ರದಂಡಾಯ ತೇ ನಮಃ ॥
ಕೋದಂಡಕಾಲದಂಡಾಸಿ ಪರಶ್ವಧ ವರಾಯುಧಾನ್ ।
ಧಾರಿಣೇ ಮಾರಿಣೇ ಲೋಕಾನ್ ಪುಣ್ಯಶೀಲಸ್ವರೂಪಿಣೇ ॥
ಗ್ರಹಣೇ ಸರ್ವಲೋಕಾನಾಂ ಜಾಗರೂಕಾಧಿಕಾರಿಣೇ ।
ದಿವ್ಯಜ್ಞಾನಪ್ರಶಸ್ತಾಯ ಸಮಸ್ತಾಂಗಾಯ ತೇ ನಮಃ ॥
ದಿವ್ಯರೂಪ ನಮಸ್ತುಭ್ಯಂ ಸಮಸ್ತಾಕೃತಯೇ ನಮಃ ।
ಚತುರ್ಹಸ್ತಾಯ ಸಾಧೂನಾಂ ಚತುರಾಸ್ಯಾಯ ತೇ ನಮಃ ॥
ಸಮಸ್ತಲೋಕವಂದ್ಯಾಯ ಸಮಸ್ತಸ್ತೋತ್ರರೂಪಿಣೇ ।
ಕಾಲಾಂಬುದಮಹಾನೀಲ ಮಹಾಮಹಿಷವಾಹನ ॥

ಕಲ್ಪಾನಲಮಹಾಕೇಲ ಜ್ವಲಲ್ಲೋಚನ ತೇ ನಮಃ ।
ಭಯಂಕರಾಯ ಪಾಪಾನಾಂ ಅಭಯಾಯ ಸುಧರ್ಮಿಣಾಂ ॥
ದ್ರವತ್ಸುಧಾಂಶುಸಂಪೂರ್ಣಚಂದ್ರಾಸ್ಯಾಯ ನಮೋ ನಮಃ ।
ಪ್ರಳಯಾಂಬುದ ನಿರ್ಘೋಷಭೀಷಯಿತ್ರೇಽಘದರ್ಶಿನೇ ॥
ಗೋಭ್ಯಾಂ ಕಾರುಣ್ಯಪೂರ್ಣಾಭ್ಯಾಂ ಪಶ್ಯತೇ ಸುಕೃತಾತ್ಮಭಿಃ ।
ಅತೀವಗರ್ಜತ್ಪ್ರಳಯಾಂಬುದಧ್ವನಿ
ಪ್ರಮೂರ್ಛಿತಾಶೇಷ ದಿಗಂತರಾಯ ॥
ಭಿಂಧೀತಿ ಭಿಂಧೀತಿ ಚ ಚೂರ್ಣಯೇತಿ ।
ವಕ್ತ್ರೇಽಸತೋ ವೀಕ್ಷ್ಯವಿಭೋ ನಮೋ ನಮಃ ॥
ಕರಾಳಕಾಯಾತಿಕಠೋರವಾಚಾ ಪಾಪಿಷ್ಠಸಂಗಂ ಭೃಶಭೀಷಯಿತ್ರೇ ।
ಜ್ವಲದ್ಯುಗಾಂತೋದ್ಯತಬಾಡಬಾಗ್ನಿ ಸಮೋರ್ಧ್ವರೋಮ್ಣೇ
ಪರಪೀಡಕಾನಾಮ್ ॥
ಸಾಧುಮಿತ್ರಾಯ ತೇ ಶಶ್ವತ್ ಮಿತ್ರಪುತ್ರಾಯ ತೇ ನಮಃ ।
ಶಾಂತಗಾತ್ರಾಯ ಶಾಂತಾನಾಂ ಮೇರುಗೋತ್ರ ಸಮೌಜಸೇ ॥

ಪೂಜಾಮಾತ್ರಾತಿತುಷ್ಟಾಯ ಭಕ್ತಾಭೀಷ್ಟಪ್ರದಾಯಿನೇ ।
ಶಿಪಿವಿಷ್ಟ ನಮಸ್ತೇಽಸ್ತು ನಮಸ್ತೇ ಪರಮೇಷ್ಠಿನೇ ॥

ವಾಚಾ ಪ್ರೀಣಯತೇ ಸಾಧೂನ್ ಪೂಜ್ಯಾನ್ ಪೂಜಯತೇ ನಮಃ ।
ಪ್ರದಾತ್ರೇ ಸಾಧುಸಲ್ಲೋಕಂ ಅಪಹರ್ತ್ರೇ ಸತಾಂ ಭಯಮ್ ॥

ಧರ್ಮಶಾಸ್ತ್ರಸ್ವರೂಪಾಯ ನ್ಯಾಯಶಾಸ್ತ್ರಾರ್ಥ ಚಕ್ಷುಷೇ ।
ವೃಕೋದರ ನಮಸ್ತುಭ್ಯಂ ಯಮುನಾಸೋದರಾಯ ಚ ॥

ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ ।

ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ ||

ಔದುಂಬರಾಯ ಬುಧ್ನಾಯ ನೀಲಾಯ ಪರಮೇಷ್ಠಿನೇ |
ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ತೇ ನಮಃ ||

ಯಮ ಉವಾಚ

ಇದಂ ಪಾಪಹರಂ ಸ್ತೋತ್ರಂ ಪುಣ್ಯಂ ಮೃತ್ಯುಹರಂ ಶುಭಮ್ |
ಗುಹ್ಯಾದ್ಗುಹ್ಯತರಂ ಸ್ತೋತ್ರಮಿದಮಾಯುಷ್ಕರಂ ಶುಭಮ್ |
ಅನೇನ ಸ್ತೋತ್ರವರ್ಯೇಣ ಯೋ ಮಾಂ ಸ್ತೌತಿ ದಿನೇ ದಿನೇ |
ಸರ್ವರೋಗ ವಿನಿರ್ಮುಕ್ತೋ ದೀರ್ಘಾಯುಷ್ಯಂ ಸಮಶ್ನುತೇ ||
ಕಿಂಚ ವಕ್ಷ್ಯೇ ರಹಸ್ಯಂ ತೇ ಪ್ರಭಾವೋ ವರ್ಣ್ಯತೇ ಸ್ತುತೇಃ
ಜನ್ಮರ್ಕ್ಷೇ (ಭರಣಿ ನಕ್ಷತ್ರದಲ್ಲಿ) ಮಮ ನಕ್ಷತ್ರೇ ಯೋಽನೇನ
ಸ್ತೌತಿ ಮಾಂ ಶುಚಿಃ
ಸಸ್ಯಾನ್ನಿರೋಗದೀರ್ಘಾಯುಸ್ತತ್ಕುಲೇ ನಾಪಮೃತ್ಯವಃ
ಇದಂ ಸ್ತೋತ್ರಂ ಪಠೇತ್ ಶುದ್ಧಃ ಶ್ರಾವಯೇದ್ವಾ ದ್ವಿಜಂ ದ್ವಿಜಃ
ಪ್ರಾಪ್ನುಯಾತ್ ಸ ಶತಾಯೂಂಷಿ ಕಿಂಪುನರ್ಭೋಗ ಸಂಪದಃ

ಇತಿ ಆಗ್ನೇಯಪುರಾಣೇ ತುಲಾಕಾವೇರಿ ಮಹಾತ್ಮ್ಯೇ ನವಮೋಽಧ್ಯಾಯಃ
|| ಶ್ರೀಕೃಷ್ಣಾರ್ಪಣಮಸ್ತು ||

# ಹರಿದಾಸ ಸಾಹಿತ್ಯದಲ್ಲಿ ಆಯುಷ್ಯ ಪ್ರಾರ್ಥನೆ

ಘೋರ ವ್ಯಭಿಚಾರ ಪರನಿಂದೆ ಪರ
ವಿತ್ತಾಪಹಾರ ಮಾಡಿದ ದೋಷದಿ
ದರಿದ್ರರಾಗುವರು ಮೂರು ವಿಧದಿಂದಲಿ
ಕಾರಣನು ನೀನೇ ದುಷ್ಕರ್ಮ
ಪರಿಹರಿಸುವುದು ಹರಿಯೆ ॥ ೧ ॥

ವಸುಮತಿಯ ಮೇಲಿನ್ನು ಅಸುರ
ಜನರೆ ಬಹಳ ವಶವಲ್ಲ ಕಲಿಯ ಬಾಧೆ
ಬಿಸಿಲಿಂದ ಪೀಡಿತವಾದ ಸಸಿಗಳಂತೆ ಶಿಶುಗಳು ನಾವಿಪ್ಪೆವು
ಅಸುರಾರಿ ನಿನ್ನ ಕರುಣಾಮೃತದ
ಮಳೆಗರೆದು ಕುಶಲದಿ ಪಾಲಿಸುವುದು
ಕೆಸರಿಂದ ಕೆಸರು ತೊಳೆದಂತೆ ಕರ್ಮದ ಪಥವು ಅಸುನಾಥ
ಹರಿಯೆ ಪೊರೆಯೋ ಸ್ವಾಮಿ ॥ ೨ ॥

ಆಧಿ ವ್ಯಾಧಿಗಳು ಉನ್ಮಾದ ವಿಭ್ರಮ ನಾನಾ ಬಾಧೆಗೌಷದವು ನೀನೆ
ಹೇ ದೇವ ನಿನ್ನ ಕರಕಲಶ ಸುಧೆವೆರೆದು ಸಾಧುಗಳ ಸಂತೈಸುವಿ
ಮೋದ ಬಡಿಸುವಿ ನಿನ್ನ ಸಾಧಿಸುವರಿಗೆ ಶುಭೋದಯಂಗಳನೀವಿ
ಆದರಿಸಿ ಇವಗೆ ತವ ಪಾದ ಧ್ಯಾನವನಿತ್ತು ಸಾಧುಗಳೊಳಗಿಟ್ಟು
ಮೋದ ಕೊಡು ಸರ್ವದಾ ॥ ೩ ॥

ಅನ್ಯರನು ಭಜಿಸದಲೆ ನಿನ್ನನೆ ಸ್ತುತಿಸುತ ನಿನ್ನ ಚಿಹ್ನೆಗಳ ಧರಿಸಿ
ನಿನ್ನವರ ವರನೆನಿಸಿ ನಿನ್ನ ನಾಮೋಚ್ಚರಿಸಿ ನಿನ್ನಿಂದ ಉಪ ಜೀವಿಸಿ
ಅನ್ನ ಆರೋಗ್ಯಕ್ಕೆ ಅಲ್ಪ ಜೀವಿಗಳಿಗೆ ಇನ್ನು ಅಲ್ಬರಿಯು ಬೇಕೆ
ನಿನ್ನ ಸಂಕಲ್ಪ ಭಕ್ತರ ಪೋಷಕನೆಂಬ ಘನ್ನ ಬಿರುದಿನ್ನು
ಉಳುಹೋ ಸಲಹೋ ॥ ೪॥

ನಿನ್ನವರಲಿ ಇವಗೆ ಇನ್ನು ರತಿಯನು ಕೊಟ್ಟು ನಿನ್ನವನೆಂದು ಅರಿದು
ನಿನ್ನ ನಾ ಪ್ರಾರ್ಥಿಸಿದ ಅನ್ಯರಿಗೆ ಅಲ್ಬರಿಯೆ ಎನ್ನ ಪಾಲಿಸುವ ದೊರೆಯೆ
ಎನ್ನ ಮಾತಲ್ಲವಿದು ಎನ್ನ ಹಿರಿಯರ ಮಾತು ಮನ್ನಿಸಬೇಕು ಕರುಣಿ
ಅನಂತ ಗುಣಪೂರ್ಣ ಗೋಪಾಲ ವಿಠಲ ಇನ್ನಿದನೆ
ಪಾಲಿಸುವುದು ಸ್ವಾಮಿ ॥ ೫ ॥

## ಸುಳಾದಿಗಳು

೧. ಧ್ರುವತಾಳ

ಆಯುವೃದ್ಧಿ ಆಗುವುದು ಯಶಸ್ಸು ಬರುವುದು
ಕಾಯ ನಿರ್ಮಲನ ಕಾರಣವಹುದು ।
ಮಾಯೆ ಹಿಂದಾಗುವುದು ನಾನಾ ರೋಗದ ಬೀಜ
ಬೇಯಿಸಿ ಕಳೆವುದು ವೇಗದಿಂದ
ನಾಯಿ ಮೊದಲಾದ ಕುತ್ಸಿತ ದೇಹ ನಿ-
ಕಾಯವ ತೆತ್ತು ದುಷ್ಕರ್ಮದಿಂದ ।
ಕ್ರಿಯಮಾಣ ಸಂಚಿತ ಭರಿತವಾಗಿದ್ದ ದುಃಖ
ಹೇಯ ಸಾಗರದೊಳು ಬಿದ್ದು ಬಳಲಿ
ನೋಯಿಸಿಕೊಂಡು ನೆಲೆಗಾಣದೆ ಒಮ್ಮೆ ತನ್ನ ಬಾಯಲಿ
ವೈದ್ಯ ಮೂರುತಿ ಶ್ರೀ ಧನ್ವಂತರಿ ।

ರಾಯ ರಾಜೌಷಧ ನಿಯಾಮಕ ಕರ್ತು
ಶ್ರೀಯರಸನೆ ಎಂದು ತುತಿಸಲಾಗಿ ।
ತಾಯಿ ಒದಗಿ ಬಂದು ಬಾಲನ್ನ ಸಾಕಿದಂತೆ ।
ನೋಯಗೊಡದೆ ನಮ್ಮನ್ನು ಪಾಲಿಪಾ ।
ಧ್ಯೇಯಾ ದೇವಾದಿಗಳಿಗೆ ಧರ್ಮಜ್ಞಗುಣಸಾಂದ್ರ ।
ಶ್ರೇಯಸ್ಸು ಕೊಡುವನು ಭಜಕರಿಗೆ ।
ಮಾಯ-ಮಂತ್ರದಿಂದ ಜಗವೆಲ್ಲ ವ್ಯಾಪಿಸಿ ।
ನ್ಯಾಯವಂತನಾಗಿ ಚೇಷ್ಟೆಮಾಳ್ಪ ।
ವಾಯು ವಂದಿತ ನಿತ್ಯ ವಿಜಯ ವಿಠ್ಠಲರೇಯಾ ।
ಪ್ರಿಯನು ಕಾಣೋ ನಮಗೆ ಅನಾದಿ ರೋಗ ಕಳೆವಾ ।

೨. ಮಟ್ಟತಾಳ

ಧನ್ವಂತರಿ ಸಿರಿ ಧನ್ವಂತರಿಯೆಂದು ।
ಸನ್ನುತಿಸಿ ಸತತ ಭಿನ್ನ ಜ್ಞಾನದಿಂದ ।
ನಿನ್ನವ ನಿನ್ನವನೆಂದು ಘನತೆಯಲಿ ನೆನೆದ ಮನುಜ ।
ಘನ್ನ ಮೂರುತಿ ಒಲಿದು ನಲಿವ ಭು
ವನದೊಳು ಧನ್ಯನು ಧನ್ಯನೆನ್ನಿ ।
ಚೆನ್ನ ಮೂರುತಿ ಸುಪ್ರಸನ್ನ ವಿಜಯ ವಿಠ-
ಲನ್ನ ನಿತ್ಯನೆಂದು ಬಣ್ಣಿಸು ಬಹು ವಿಧದಿ ॥

೩. ತ್ರಿಪುಟ ತಾಳ

ಶಶಿಕುಲೋತ್ಥ ದೀರ್ಘತಮ ನಂದನ ದೇವ ದೇವಾ ।
ಶಶಿವರ್ಣ ಪ್ರಕಾಶ ಪ್ರಭುವೆ ವಿಭುವೆ ।
ಶಶಿಮಂಡಲ ಸಂಸ್ಥಿತ ಕಲಶ ಪಾಣಿ ।
ಬಿಸಜಲೋಚನ ಆಶ್ವಿನೇಯ ವಂದ್ಯ ।

ಶಶಿಗರ್ಭ ಭೂರುಹಲತೆ ಪೊದೆ ರೋಗವ ತಾ ಓಡಿಸುವ।
ಔಷಧಿ ತುಳಸಿ ಜನಕ ವಸುದೇವ।
ಅಸುರ ನಿರ್ಜರತತಿ ನೆರೆದು ಗಿರಿಯ ತಂದು।
ಮಿಸುಕದಲೆ ಮಹೋದಧಿ ಮಥಿಸಲಾಗಿ।
ನಸು ನಗುತ ಪುಟ್ಟಿದೆ ಪೀಯೂಷ ಘಟ ಧರಿಸಿ।
ಅಸಮ ದೈವವೆ ನಿನ್ನ ಮಹಿಮೆಗೆ ನಮೋ ನಮೋ।
ಬಿಸಜ ಸಂಭವ ರುದ್ರ ಮೊದಲಾದ ದೇವತಾ
ಋಷಿನಿಕರ ನಿನ್ನ ಕೊಂಡಾಡುವದು।
ದಶ ದಿಶದೊಳು ಮೆರೆವ ವಿಜಯ ವಿಠಲ।
ಭೀಷಣ ಅಸು ಇಂದ್ರಿಯಗಳ ರೋಗ ನಿವಾರಣ॥

೪. ಅಟ ತಾಳ

ಶರಣು ಶರಣು ಧನ್ವಂತರಿ ತಮಗುಣನಾಶ।
ಶರಣು ಆರ್ತಜನ ಪರಿಪಾಲಕ ದೇವ।
ತರುವೆ ಭವತಾಪ ತರಣ ದಿತಿಸುತ ಹರಣ ಮೋಹಕಲ್ಪ।
ಪರಮ ಪೂರ್ಣ ಬ್ರಹ್ಮ ಬ್ರಹ್ಮ ಉದ್ಧಾರಕ।
ಉರುಪರಾಕ್ರಮ ಉರಗಶಾಯಿ।
ವರ ಕಿರೀಟ ಮಹಾಮಣಿ ಕುಂಡಲ ಕರ್ಣ।
ಮಿರುಗುವ ಹಸ್ತ ಕಂಕಣ ಹಾರ ಪದಕ।
ಹೀರ ಕಾಂಚಿ ಪೀತಾಂಬರ ಚರಣ ಭೂಪ।
ಸಿರಿವತ್ಸಲಾಂಛನ ವಿಜಯ ವಿಠಲ ಪ್ರಿಯ।
ತರುಣ ಗಾತ್ರ ಜ್ಞಾನ ಮುದ್ರಾಂಕಿತ ಹಸ್ತ॥

೫. ಆದಿತಾಳ

ಏಳುವಾಗಲಿ ಮತ್ತೆ ತಿರುಗಿ ತಿರುಗುವಾಗಲಿ।

ಬೀಳುವಾಗಲಿ ನಿಂತು ಕುಳ್ಳಿರುವಾಗಲಿ ।
ಬೀಳುವಾಗಲಿ ಮಾತು ಕೇಳುವಾಗಲಿ ಕರೆದು ।
ಹೇಳುವಾಗಲಿ ಹೋಗಿ ಸತ್ಕರ್ಮ ಮಾಡುವಾಗಲಿ ।
ಬಾಳುವಾಗಲಿ ಭೋಜನ ನಾನಾ ಷಡ್ರಸಾನ್ನ ಸ-
ಮ್ಮೇಳವಾಗಲಿ ಒಮ್ಮೆ ಪುತ್ರಾದಿಗಳೊಡನೆ ।
ಕೇಳಿ ಮಾಡಲಿ ಮನುಜ ಮರಿಯಾದೆ ತನ್ನಯ ।
ನಾಲಿಗೆ ಕೊನೆಯಲ್ಲಿ ಧನ್ವಂತರಿ ಎಂದು ಒಮ್ಮೆ
ಕಾಲ ಕಾಲದಲ್ಲಿ ಸ್ಮರಿಸಿದರೆ ಆವಾಗ
ವೇಳೆವೇಳೆಗೆ ಬಹುಭವಬೀಜ ಪರಿಹಾರ
ನೀಲಮೇಖಶ್ಯಾ ವಿಜಯವಿಠಲರೇಯ
ಓಲಗ ಕೊಡುವನು ಮುಕ್ತರ ಸಂಗದಲ್ಲಿ
ಧ್ವನಂತರೀ ಧ್ವನಂತರಿ ಎಂದು
ಪ್ರಣವ ಪೂರ್ವಕದಿಂದ ವಂದಿಸಿ
ನೆನೆಯಲು ವಿಜಯವಿಠಲ ಒಲಿವ ॥

---

ಎಂಟು ಗೇಣಿನ ದೇಹ ರೋಮಗ
ಳೆಂಟು ಕೋಟಿಯು ಕೀಲ್ಗಳಿರುವ
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯ ಮನವೊಲಿದು
ನೆಂಟ ನೀನಿರ್ದಗಲಿದೊಡೆ ಒಣ
ಹೆಂಟೆಯಲಿ ಮುಚ್ಚುವರು ದೇಹದ
ಉಂಟೆ ಫಲಪುರುಷಾರ್ಥ ರಕ್ಷಿಸು ನಮ್ಮನನವರ ॥

-ಕನಕದಾಸರು

# ಅಪಮೃತ್ಯು ಪರಿಹಾರಕ ಹಾಡುಗಳು

-ಹರಿದಾಸರತ್ನಂ ಗೋಪಾಲದಾಸರು

ತಿರುಪತಿಯ ತಿಮ್ಮಪ್ಪನ ಯಾತ್ರೆ ಮುಗಿಸಿಕೊಂಡು, ಗುರುಗಳೊಡಗೂಡಿ ಹೊರಟು-ಉತ್ತನೂರು ತಲುಪಿದರು - ಶ್ರೀಭಾಗಣ್ಣದಾಸರು. ಶ್ರೀವಿಜಯರಾಯರು, ತಮ್ಮೂರು (ಚೀಕಲಪರಿವಿ) ತಲುಪಿದರು.

ಹದಿನೈದು-ಇಪ್ಪತ್ತು ದಿನಗಳ ನಂತರ ಆದವಾನಿಯ ದಿವಾನರಾದ ತಿಮ್ಮಣ್ಣಯ್ಯನವರು, ಯಾವುದೋ ಒಂದು ಉತ್ಸವವನ್ನು ಹಮ್ಮಿಕೊಂಡರಂತೆ, ಅದಕ್ಕಾಗಿ ತಮ್ಮ ಗುರುವರ್ಯರಾದ ಶ್ರೀವಿಜಯದಾಸಾರ್ಯರನ್ನೂ, ಪ್ರಿಯಮಿತ್ರವರರಾದ ಶ್ರೀಭಾಗಣ್ಣದಾಸಾರ್ಯರು ಮತ್ತು ಅವರ ಅನುಜರನ್ನೂ ಆಹ್ವಾನಿಸಿದರು. ಉತ್ಸವ ನಡೆಯುತ್ತಿದೆ - ದೈವಸಂಕಲ್ಪದಂತೆ ಯಾವುದೋ ಮಾರಿಕಾ ಉಪದ್ರವ ಆ ಊರಿನಲ್ಲಿ ಹಬ್ಬಿತು. ಉತ್ಸವ ಸಾಂಗೋಪಾಂಗವಾಗಿ ನೆರವೇರುವುದೋ ಇಲ್ಲವೋ ಎನ್ನುವ ಆತಂಕ ಮೂಡಿತು. ಪಂಗನಾಮ ತಿಮ್ಮಣ್ಣಯ್ಯನವರಿಗೆ (ಶ್ರೀವೇಣುಗೋಪಾಲ ವಿಟ್ಠಲದಾಸರಿಗೆ). ಉತ್ಸವದ ಕಾರ್ಯಕ್ರಮಗಳನ್ನು ಮಾತ್ರ ಯಾವುದೇ ಕಾರಣದಿಂದ ಕೊರತೆಮಾಡಲಾಗದೆಂದು ಕಾರ್ಯಕರ್ತರಿಗೆ ತಿಳಿಸಿದರು ಶ್ರೀತಿಮ್ಮಣ್ಣಯ್ಯನವರು.

ಪ್ರಾರಬ್ಧಕರ್ಮ ಯಾರನ್ನು ತಾನೇ ಬಿಟ್ಟೀತು? ಇದ್ದಕ್ಕಿದ್ದಂತೆ ಆ ಮಾರಿಕೋಪದ್ರವಕ್ಕೆ ಶ್ರೀತಿಮ್ಮಣ್ಣಯ್ಯನವರೂ ಒಳಗಾದರು. ಒಂದೆರಡು ದಿನಗಳೊಳಗೆ ಉಲ್ಬಣಗೊಂಡಿತು ಇವರ ವ್ಯಾಧಿ. ಆಗ, ಗುರುಗಳಾದ ಶ್ರೀವಿಜಯದಾಸಾರ್ಯರನ್ನು ತಮ್ಮ ಸಮೀಪಕ್ಕೆ ದಯಮಾಡಲು ಪ್ರಾರ್ಥಿಸಿ, ಕರೆಯಿಸಿ ತಾನು ಇನ್ನೇನು ದೇಹತ್ಯಾಗಮಾಡುವ ಸ್ಥಿತಿಯಲ್ಲಿ

ಇದ್ದೇನೆಂದೂ, ಈ ಉತ್ಸವದ ಮಂಗಳಮಹೋತ್ಸವಮುಗಿಸಿ, ಗುರುಗಳ ಪಾದಕ್ಕೆರಗಿ, ಅವರ ಆಶೀರ್ವಾದ ಪಡೆದು ಆನಂದಪಡುವ ಸುಯೋಗ ತನಗಿಲ್ಲವೆಂದೂ ಭಾವಿಸಿದ ಶ್ರೀತಿಮ್ಮಣ್ಣನವರು ತಮ್ಮೆದುರಿಗೆ ಬಂದುನಿಂತ-ಶ್ರೀವಿಜಯದಾಸಾರ್ಯರನ್ನು ಕುರಿತು-

**ರಾಗ-ಬಿಲಹರಿ** **ಆದಿತಾಳ**

ಕಾಯೊ ಕಾಯೊ ಗುರು ವಿಜಯರಾಯ ॥ ಪ ॥
ಕಾಯೊ ಕಾಯೋ ವರವೀಯೊ ವಿಜಯಗುರು
ರಾಯ ನೀನಲ್ಲದುಪಾಯವೆಯಿಲ್ಲ ॥ ಅ.ಪ. ॥
ತಾಪತ್ರಯಗಳುದ್ದೀಪನವಾಗಿದೆ
ನೀ ಪರಿಪಾಲಿಸದೀಪರಿ ಥರವೆ ॥ ೧ ॥
ಪಾಪಗಳೆಣಿಸದೆ ಪಾವನ ಮಾಳ್ಪದು
ಶ್ರೀಪತಿ ಪಡೆದ ಸುರಾಪಗದಂತೆ ॥ ೨ ॥
ದೂರ ನೀ ನೋಡು ಆರು ಇಲ್ಲವೊಗತಿ।
ಕಾರುಣ್ಯದಲಿ ನಿವಾರಿಸು ದುರಿತ ॥ ೩ ॥
ಸ್ವೀಕರ ಮಾಳ್ಪದು ನೀಕರಿಸದೆ ಬಲು
ವ್ಯಾಕುಲನಾಗಿಹೆ ನೀ ಕರುಣದಲಿ ॥ ೪ ॥
ಪರಿಹರಿಸಲು ಸಲ್ಲ ಕರವಿಡಿ ಬ್ಯಾಗನೆ
ಗುರುವೆ ನಿಮ್ಮಯ ಚರಣಸೇವಕನ ॥ ೫ ॥
ನೀನಾಳುವರೊಳು ಈ ನರಮೂರ್ಖನು
ಏನು ಅರಿಯೆ ಬಲುದೀನನಾಗಿಹೆನೊ ॥ ೬ ॥
ಆಲಸತಾಳದು ಪಾಲಿಸು ವೇಣುಗೋ-
ಪಾಲವಿಟ್ಠಲನಾಳೊ ಕೃಪಾಳು ॥ ೭ ॥

ಹೀಗೆಂದು ಪ್ರಾರ್ಥಿಸಿದರು.

ಈತನ ಪ್ರಾರ್ಥನೆಯನ್ನು ಮನ್ನಿಸಿದ ಶ್ರೀವಿಜಯದಾಸಾರ್ಯರು, ಪರಮಕೃಪಾಳುಗಳಾದ್ದರಿಂದಲೂ ಈತನಿಂದ ಆಗಬೇಕಾದ ಸಾಧನವಿಶೇಷಗಳು, ಇನ್ನೂ ಬಹಳವಿರುವುದರಿಂದ, ಈತನ ದೇಹವನ್ನು ಉಳಿಸಿಕೊಡು ಎಂದು ತಮ್ಮ ಉಪಾಸ್ಯಮೂರುತಿಯಲ್ಲಿ ಈತನ ಅಕಾಲಮೃತ್ಯುಹರಣಕ್ಕಾಗಿ, ಈ ಸುಳಾದಿಯ ಮೂಲಕ ಮೊರೆಯಿಟ್ಟರು-

ಅಕಾಲಮೃತ್ಯು ಪರಿಹಾರ (ಐತಿಹಾಸಿಕ) ಪ್ರಾರ್ಥನಾ-

**ರಾಗ-ರೇಗುಪ್ತಿ** **ಧ್ರುವತಾಳ**

ನಂಬಿದೆ ಎಲೊ ಹರಿ ಅಂಬರರೂಪಕಾರಿ
ಬೆಂಬಲವಾಗು ಭವರೋಗ ನೀಗು
ಡಿಂಬವುಳ್ಳನಕ ಕ್ಲೇಶ ಬಡಿಸುವ ಶೋಕ
ಯೆಂಬದು ಕಾಣಿಸದಿರು ಕೈಯ್ಯಾದೋರೊ
ಕುಂಭಿಣಿಯೊಳು ನೀನೆಂಬ ಮಾನವರಿಗೆ
ಅಂಬುಧಿಯಾಪೋಷಣ್ಯಾಗದೇನೊ
ತಿಂಬೆನೆಂಬಾ ಮೃಗಟಂಬ ಅಡವಿಯೊಳು
ಅಂಬೆಯಾ ತಡದಂತೆ ತೆರನಾಗಿದೇ
ಮುಂಬಿಡಿಸುವರಿಲ್ಲ ಮುದ್ದುಲಕುಮಿನಲ್ಲ
ಅಂಬುಜಭವಗಾದರು ನೀನೆ ಗತಿಯೊ
ಜಂಬಾರಿನುತ ವಿಷ್ಣು ವಿಜಯವಿಟ್ಠಲ ಕರು-
ಣಾಂಬುಧಿಯೇ ನೀನು ನಮಿಸುವೆ ನಾನು ॥ ೧ ॥

**ಮಟ್ಟತಾಳ**

ಅಪಮೃತ್ಯು ಸಮೀಪಿಸಿದೆ ಎನ್ನ ಅಪಹಾಸಲ್ಲವೊ
ಕೃಪೆಯಿಂದಲಿ ನೋಡು ಪರಂಪರಮ ಮಹಿಮ
ತಪಸಿಗಳ ಒಡೆಯಾ ಕಪಿ ವಿಜಯವಿಟ್ಠಲ
ಉಪಶಮನ ಗೈಸೊ ॥ ೨ ॥

**ತ್ರಿವಿಡಿತಾಳ**

ಅಕಾಲಮೃತ್ಯುವಿನ ಗಂಟಲಗಾಣನೆಂದು
ನಾಕಾದಿಲೋಕದಲಿ ಪೊಗಳುತಿದೆ ಪದ-
ಸೋಕಲು ಪಾಷಾಣಪೆಣ್ಣಾಗಿ ಮೆರೆದದು
ಲೋಕ ಈರೇಳರೊಳು ಬಲ್ಲರಲ್ಲ
ಲೋಕಾಧ್ಯಕ್ಷನಾಮಾ ವಿಜಯವಿಟ್ಠಲದೇವ
ನೂಕುವದು ಬಂದ ಅಪಮೃತ್ಯುಗಳನ ॥ ೩ ॥

**ಅಟ್ಟತಾಳ**

ಭಕುತಿ ವಿರಕುತಿ ನಿಜ ಶಕುತಿಬೇಕು ನಿನ್ನ ಭಜಿಸಿ
ಮುಕುತಿಯನ್ನು ಪಡವವಂಗೆ
ಯುಕುತಿಯೆಂದು ಯುಕುತಿವಂತರು
ಮುಕುತಾರ್ಥ ಪೇಳೂವವರು
ರಿಕುತ ನಿನ್ನ ಮಾತು ಲಾಲಿಸಿ
ಭಕುತಿ ರಕುತಿ ಶಕುತಿಯೆಲ್ಲ
ಭಕುತಿಮಿತಿಗೆ ಪಾಲಿಸಯ್ಯಾ
ಶಕುತಿಮತ ಶ್ರೇಷ್ಠ ನಾಮಾ ವಿಜಯವಿಠ್ಠಲ
ಸಕಲರೊಡಿಯಾ ಸುಕುತಾರ್ಥ ತೋರಿಸಯ್ಯಾ
ಸತತ ನಿನ್ನ ನೆನೆಸುವಂತೆ ॥ ೪ ॥

**ಆದಿತಾಳ**

ನಿನ್ನ, ದಿವ್ಯ ನಿನ್ನ ಚರಣವನ್ನು ಇನ್ನುಪಿಡಿದಮ್ಯಾಲೆ
ಎನ್ನ ದುಷ್ಕರ್ಮಗಳಿನ್ನು ಪೋಗದಿರಲು
ಇನ್ನು ನಿನ್ನ ಬರಿದೆ ನಾ ಮುನ್ನೆ ಭಜಿಸಲು ಯಾಕೆ
ಮಣ್ಣುಕಸ್ತೂರಿಯಾ ಕೊಡೆ ಬಣ್ಣ ಪ್ರತಿಕುರಹವೇನೊ
ಚನ್ನಿಗ ನಿನ್ನಂಘ್ರಿಯ ಪ್ರಸನ್ನಿಕರಿಸಿಕೊಂಡ ಮೇಲೆ

ಎನ್ನ ಕರ್ಮ ಬೆನ್ನು ಬಿಡದೆ ಸನ್ನಿಧಿಯಾಗಿಪ್ಪದೆ ಪ್ರ-
ಸನ್ನಾತ್ಮನಾದ ದೇವರನ್ನ ವಿಜಯವಿಟ್ಠಲ
ನಿನ್ನ ನಾಮಾನೆನಿಸಿ ದೂರನ್ನು ಮಾಡೊ ಪಾಪದಿಂದ ॥ ೫ ॥

**ಜತೆ**

ಜತೆತಪ್ಪದಂತೆ ಜತನವ ಮಾಡಿ ನಿಜಭಾಗ-
ವತರೊಳು ಇಡು ನಮ್ಮ ವಿಜಯವಿಟ್ಠಲ ದಕ್ಷ ॥ ೬ ॥

ಶ್ರೀವಿಜಯರಾಯರು, ಪಕ್ಕದಲ್ಲಿದ್ದ ಶ್ರೀಭಾಗಣ್ಣದಾಸರನ್ನು ಕುರಿತು- ಈತ ನಿನ್ನ 'ಪ್ರಾಣಸಖ'ರಲ್ಲಿ ಒಬ್ಬನಲ್ಲವೇನೋ ಭಾಗಣ್ಣ- ನೀನೂ ಪ್ರಾರ್ಥಿಸು ಸ್ವಾಮಿಯನ್ನು ಎಂದರು. ಗುರುಗಳ ಆ ಆಜ್ಞಾಧಾರಕನಾದ ಶ್ರೀಭಾಗಣ್ಣದಾಸರು ಶ್ರೀವೇಣುಗೋಪಾಲದಾಸರ ಅಪಮೃತ್ಯು ಪರಿಹಾರ ಕ್ಕಾಗಿ-

**ರಾಗ-ಕಲ್ಯಾಣಿ** **ಝಂಪಿತಾಳ**

ವೇಣುಗೋಪಾಲವಿಟ್ಠಲದಾತ ಮಹಾಪ್ರಭುವೆ-
ನಾ ಬೇಡುವೆನು ವರವ
ಪ್ರಾಣಿ ಈತಗೆ ಬಂದ ಹಾನಿ ಹಿಂದಕೆ ಮಾಡಿ
ಕ್ಷೋಣಿಯಲಿ ನಿಲಿಸಿ ಸಲಹೋ ಸ್ವಾಮಿ ॥ ಪ ॥
ಸಾಧು ಜೀವರ ಸೃಜಿಸಿದುದಕೆ ಫಲವೇನಿಲ್ಲಿ
ಬಾಧೆ ತಂದಿತ್ತಬಳಿಕ
ಈ ದಾವಶತವತ್ಸರಾಯು ಮನುಷ್ಯರಿಗೆ ಮರಿ-
ಯಾದೆ ಇಲ್ಲದೆ ಪೋಯಿತೊ
ಬಾಧಕವೇನೀತನಿಂದ ಅಪರಾಧ ಆಯು
ಆದದ್ದು ಕೊರತೆಯಿನ್ನು
ಸಾಧುಗಳ ಸಮ್ಮತ ಸನ್ಮಾರ್ಗ ಪ್ರವರ್ತ-
ಕಾದ ಜೀವಿಗೆ ಬರಿದೆ ಬಾಧೆ ಬಡಿಸುವರೆ ॥ ೧ ॥

ಚಿಂತಾಮಣಿಯ ವೃಕ್ಷವಿಂತಾದ ಕಾರಣ ಎಲ್ಲ
ಚಿಂತಿಪದು ಸಂತರುಗಳು
ಪಿಂತಿನಾ ಜನುಮದಲಿ ಅಪಮೃತ್ಯುಪರಿಹಾರ
ಚಿಂತಾಯಕಾ ಕಳದಿಲ್ಲವೆ
ಚಿಂತಿತನಾಗಿಪ್ಪ ನಮ್ಮ ಹಿರಿಯರಿಂದ
ಸಂತೋಷ ಬಡಿಸಿ ನಿನ್ನ
ಎಂತು ಪರಿ ಅವರು ಬಂದು ದುರಿತವು ಕಳೆದು
ಸಂತೋಷಮಾಡು ಮನಕೆ ಕರುಣಿ ॥ ೨ ॥
ಬಿತ್ತಿ ಬೀಜವ ಬೆಳಸಿ ಕೊಯ್ಯಕುಳಿತವಗೆ ಮಾ।
ರುತ್ತವು ಇಲ್ಲ ಖರಿಯಾ
ಕಿತ್ತುತ್ತಾ ದಂಟುಗಳ ಬಾಹೋದರೊಳಗಾಗೆ
ಪ್ರತ್ಯೇಕ ಬಳ್ಳಿಯಿಂದ
ಸುತ್ತಿದ ದಂಟನು ಬಿಟ್ಟು ಕೊಡುವವರು ಸ್ನೇಹ
ಮತ್ತೆ ಬಳ್ಳಿಯ ಮೇಲಿಟ್ಟು
ಸುತ್ತ ಜನರು ಬಳ್ಳಿಯಂತೆ ಇವನಿಂದು ಪಾ-
ವಿತ್ರರಾಗಿಹರು ಉಳಹೋ ಸಲಹೋ ॥ ೩ ॥
ಆವಜನುಮದಲಿಂದ ನಾವಾವ್ರೋ ಅರಿಯೆ
ನೋವು ಮನಕಿನ್ನು ಬಹಳಾ
ಜೀವರಾಗತಿಗಳು ನೀನು ಬಲ್ಲಿಯೊ ಸ್ವಾಮಿ
ಸೇವ್ಯಸೇವಕರ ಸ್ಥಿತಿಯು
ಈ ವಸುಧಿಯಲಿ ನಿನ್ನ ಶರಣರೇ ಸ್ವಲ್ಪವು
ಆವ ಅಸುರರೆ ಬಹಳ
ಸೇವಾನುಸೇವಕರ ಬಿನ್ನಪವ
ನೀ ವೊದಗಿ ಕೇಳಿ ಸಾಕು ಹರಿಯೆ ॥ ೪ ॥

ಪ್ರಾರ್ಥಿಸಿದೆ ನಿನ್ನ ಭಕುತನ ಆರ್ತಿಯನು ಮನದಲಿ
ಕರ್ತೃಯಾದದರಿಂದಲೀ
ಕೀರ್ತಿ ನಿನ್ನದು ಭಕುತ ಸ್ವಾರ್ಥನೆಂಬಾ ಬಿರುದು
ವ್ಯರ್ಥ ಅನ್ಯರಿಗೆ ತುತಿಸೆ
ಕರ್ತೃ ನೀನಾಗಿ ತಾನಿಂದು ಮಾಡಿಸುವಂಥ
ಸತ್ಕರ್ಮಗಳು ಉಂಟು
ಪಾರ್ಥಸಖ ಚೆಲುವ ಗೋಪಾಲವಿಟ್ಠಲ ಅಪ-
ಮೃತ್ಯು ಪರಿಹರಿಸಿನ್ನು ಭಕುತನ್ನ ಸಲಹೋ ॥ ೫ ॥

ಎಂದು ಶ್ರೀಹರಿಯಲ್ಲಿ ಮೊರೆಯಿಟ್ಟರು.

ಅಂದು ಸಾಯಂಕಾಲ ನಾಲ್ಕು ಘಂಟೆಯಾಗಿದ್ದಿರಬಹುದು. ಶ್ರೀವೇಣುಗೋಪಾಲದಾಸರಿಗೆ, ವ್ಯಾಧಿ ಉಲ್ಬಣಗೊಂಡಂತೆ ಅರಿವಾಯಿತು - ಅಲ್ಲಿನ ಭಕ್ತರಿಗೆ. ಇದನ್ನು ಕೇಳಿದ ಶ್ರೀಗುರುಗೋಪಾಲವಿಟ್ಠಲದಾಸರು ಬಂದು ನೋಡಿದರು-ಪರಿಸ್ಥಿತಿಯನ್ನು. ಉತ್ಸವದಲ್ಲಿ ಭಾಗಿಗಳಾಗಿದ್ದ ಶ್ರೀವಿಜಯದಾಸಾರ್ಯರನ್ನು ಒಂದೆಡೆ ಕರೆತಂದು-ಈತನ ಅನಾರೋಗ್ಯದ ಹೆಚ್ಚಳದ ಪರಿಸ್ಥಿತಿಯನ್ನು ತಮ್ಮ ಪರಮ ಗುರುಗಳ ಎದುರಿಗೆ ನಿವೇದಿಸಿ - ಸಾಧನಜೀವಿಯಾದ ಈತನನ್ನು ತಪಸ್ಸಿದ್ಧರಾದ ತಾವು ಉಳಿಸಿಕೊಡಬೇಕೆಂದು-

**ರಾಗ-ಭೈರವಿ** **ತ್ರಿವಿಡಿತಾಳ**

ಕಾಯೊ ಗುರುರಾಯ ಕವಿಗೇಯ
ಆಯಾಸ ಪರಿಹರಿಸೊ ರಾಯ ಗುರು ವಿಜಯ ॥ ಪ ॥
ಹಗಲು ಇರುಳು ನಿನ್ನ ಹೊಗಳುವ ಭಕುತನ್ನ
ಹಗೆಗಳಿಗೊಪ್ಪಿಸಲು ನಗರೆ ಮಾನ್ನವರು ॥ ೧ ॥
ನೀರಿಗೆ ಅಂಜಿ ದೂರಸೇರಿದಗಭಯವಿತ್ತು
ಪಾರುಗಾಣಿಸದಿರಲು ಕೀರುತಿ ಕೆಡದೆ ॥ ೨ ॥

ಆಡಿದ ವಚನ ಸತ್ಯ ಮಾಡದಿದ್ದರೆ ನಿನ್ನ
ಪಾಡಿಪೊಗಳಲ್ಯಾಕೊ ಪ್ರೌಢಜನರೊಡಿಯ || ೩ ||
ಶಪಥದಿ ವೇಣುದಾಸನ್ನವಿಪಥ ನೀ ಪೊರಿಯದಿರಲು
ತಪಸುಯಿದ್ದೇನು ಫಲವೊ ಕೃಪಣವತ್ಸಲನೆ || ೪ ||
ಎನ್ನ ಗುರುಗಳ ಗುರುವೆ ನಿನ್ನ ತುತಿಸಿ ಕರವೆ
ಬಿನ್ನಹ ಚಿತ್ತೈಸೊ ಧನ್ಯ ಜನಮಾನ್ಯ || ೫ ||
ಹಲವು ವಿಧದಿ ಹರಿಯಾ ಒಲಿಮೆಯ ಪಡೆದ ಪಿರಿಯಾ
ಸುಲಭದಿ ವೇಣುದಾಸನ್ನ ಸಲಹೊ ಶ್ರೀಗುರುರಾಯ || ೬ ||
ಗುರುಗೋಪಾಲವಿಟ್ಠಲನ್ನ ಚರಣಾಶ್ರಯರಾದ ।
ಪುರಂದರದಾಸರಾಯರ ವರಾನುಗ್ರಹ ಬಲದಿ || ೭ ||

-ಹೀಗೆ ಪರಮಗುರುಗಳನ್ನು ಪ್ರಾರ್ಥಿಸಿದರು-ಆಗ ಶ್ರೀವೇಣು ಗೋಪಾಲದಾಸರ ಬಳಿ ದಯಮಾಡಿದ ಶ್ರೀವಿಜಯದಾಸಾರ್ಯರು, ತಮ್ಮ ಶಿಷ್ಯನ ತಲೆಯ ಮೇಲೆ ಕೈಯಿಟ್ಟು ಅದೇನು ಪ್ರಾರ್ಥಿಸಿದರೋ ತಮ್ಮ ಸ್ವಾಮಿಯಲ್ಲಿ- ನಮಗೆ ತಿಳಿಯುವುದೆಂತು! ಆ ಹೊತ್ತಿಗೆ ಉತ್ಸವದಲ್ಲಿದ್ದ ಜನರೆಲ್ಲರೂ ಶ್ರೀತಿಮ್ಮಣ್ಣಯ್ಯನವರ ಬಳಿ ಬಂದು ಸೇರಿದ್ದರು. ಶ್ರೀದಾಸರು ತಿಮ್ಮಣಯ್ಯನವರ ತಲೆಯಮೇಲೆ ಕೈಯಿಟ್ಟು ಪ್ರಾರ್ಥಿಸುತ್ತಿದ್ದಂತೆಯೇ ಎದ್ದು ಕುಳಿತರು ಶ್ರೀತಿಮ್ಮಣ್ಣಯ್ಯನವರು. ಅಪಮೃತ್ಯುವಿನ ಭಯ ತಾನಾಗಿ ತಾನು ದೂರ ಓಡಿತು-ತಿಮ್ಮಣ್ಣಯ್ಯನವರ ಗೆಲುವಿನ ಮುಖ ಕಂಡ ಅಲ್ಲಿನ ಜನರ ಆನಂದ ವರ್ಣಿಸಲಸದಳ-ಮುಂದೆ ಉತ್ಸವವು ಉತ್ಸಾಹದಿಂದ ಪೂರ್ಣಗೊಂಡಿತೆಂದು ಹೇಳಬೇಕೇನು?

# ಹೃದ್ರೋಗ ಪರಿಹಾರಕ
# ಕಪಿಲಾವತಾರ ಸುಳಾದಿ-1

ಧ್ರುವತಾಳ

ಉಪಜೀವ್ಯ ನಿಜಾನಂದ ಉದಧಿಶಯನ ಸರ್ವೇಶ।
ಸಪುತ ಸಪುತ ಲೋಕಪಾಲ ಪಾಲಕ ಕಾಮೇಶ।
ಉಪಜೀವ್ಯ ತಪೋಧನಪಾನಿಷ್ಟಪಾಪಾವನ ಪಾವಕ।
ಜಪಶೀಲ ಸಿದ್ಧಮೂರ್ತಿ ಸಾಕಾರ ಸರ್ವಾಕಾರ।
ಉಪದೇಶವ ತುಂಬುರಾದಿ ನಾರದ ವಂದಿತಪಾದಾ।
ನುಪಮೇಯ ರಮೆಯರಸ ಯೋಗಿ ಜಟಾ ವಲ್ಕಲವಾಸಾ।
ತೃಪುತ ತ್ರಿಗುಣಾತೀತ ತ್ರಿಕಾಲ ಕಾಲನಾಮಕ।
ವಿಪುಲ ಮಧ್ಯ ಯೋಗಶಾಸ್ತ್ರರಚನೆಗೈಸಿದ ಗತಿಪ್ರದ।
ಕುಪಿತ ರಹಿತ ನಿರುತ ಅಪಾರ ಅನಾದಿ।
ಅಪ್ರತಿಹತದೇವ ಚಪಲನಯನ ಅಪರಿಚ್ಛಿನ್ನ।
ವ್ಯಾಪ್ತ ಬ್ರೊಮ್ಹಾಂಡ ಕಾರಣ।
ಉಪಜೀವ್ಯ ತ್ರಿಕೋಟಿ ಕಪಿಗಳಯ್ಯಾ ಕನಕವರ್ಣ।
ಕಪಿಲ ವೃಷಾಕಪಿಪತಿ ಅಪರಬುದ್ಧನು ನೋಡು ಎ।
ನ್ನಪರಾಧ ಕ್ಷಮೆ ಮಾಡಯ್ಯಾ।
ಕೃಪಣ ವತ್ಸಲ ಉಪಹತಿಗಳನು ಕೆಡಿಸಯ್ಯಾ ಉಪಜೀವ್ಯ।
ದಿಪುತ ವಿಜಯವಿಠ್ಠಲ ಕಪಿಲಾವತಾರ ಲಾವಣ್ಯಾ ॥ ೧ ॥

ಮಟ್ಟತಾಳ

ಪದ್ಮಸಂಭವ ತನ್ನ ಛಾಯದಿಂದಲಿ ಪುಟ್ಟಿದ।
ಕರ್ದಮ ಮುನಿ ದೇವಹೂತಿಯಲ್ಲಿ ಬಂದು।
ಉದ್ಭವವಾದ ಶುಕ್ಲ ಶೋಣಿತ ರಹಿತ।

ಈದ್ಧರೆಯೊಳಗೆ ನಿನ್ನ ನಂಬಿದ ಮಾನವಗೆ ।
ಹೃದ್ರೋಗವೇ ಇಲ್ಲ ಸುಹೃತ ಸುಪ್ರಭ ಪ್ರ ।
ಭಾದ ಮೂರುತಿ ।
ಶುದ್ಧವಿಜಯವಿಠ್ಠಲ ಕಪಿಲಾತ್ಮಕ ।
ಉದ್ಧರಿಸು ಎನ್ನಮನದೊಳಗೆ ನಿಂದು ॥ ೨ ॥

**ತ್ರಿವಿಡಿತಾಳ**

ಮುನಿವರೇಣ್ಯ ಸ್ವಾಮಿ ಸ್ವತಂತ್ರ ಕರ್ತ ಸ ।
ಜ್ಜನ ಮನೋಭೀಷ್ಟ ಭಯನಾಶಕ ಶಕ್ತ ।
ಜನನಿಗೆ ಜ್ಞಾನೋಪದೇಶವ ಪೇಳಿ ಸಾ ।
ಧನ ಮಾರ್ಗ ತೋರಿ ಸಂಸಾರವೆಂಬೋ ।
ವನಧಿಯ ದಾಟಿಸಿ ಸ್ನೇಹ ಭಾವದಿಂದ ।
ನಿನಗೆ ನೀನೇ ಪೊಳೆದ(ವ) ಭಕುತವಶನೇ ।
ವನಜಭವಾದಿಗಳು ನಿನ್ನಲೀಲೆಯ ನೋಡಿ ।
ಗುಣಿಸಿ ಎಣಿಸಿ ಮೈಮರದರದಕೋ ।
ಎಣೆಗಾಣೆನೋ ಸ್ವೇಚ್ಛಾ ಕ್ರೀಡಿಗೆ ಮಂಗಳ ।
ಖಣಿಯೇ ತುಳಸೀಪ್ರಿಯ ಅತುಳ ಕೀರ್ತಿ ।
ಪ್ರಣವ ಮೂರುತಿ ನಮ್ಮ ವಿಜಯ ವಿಟ್ಠಲ ರೇಯಾ ।
ಮಣಿದು ನಮೋ ಎಂಬೆ ಸಾರ ಹೃದಯ ಬದ್ಧ ॥ ೩ ॥

**ಅಟ್ಟತಾಳ**

ಆದಿ ಮನುವಿನ ಕಾಲದಲ್ಲಿ ಪುಟ್ಟಿ ।
ಭೇದಾರ್ಥ ಜ್ಞಾನವ ಶಿಷ್ಯರಿಗೆ ಪೇಳಿ ।
ವೇದ ವೇದಾಂತವ ತಿಳುಪಿ ಅಜ್ಞಾನವ ।
ಛೇದಿಸಿಬಿಟ್ಟೆ ಬಿಸಜದಳಾಂಬಕ ।
ಸಾಧು ಸಾಧು ಸಚ್ಚಿದಾನಂದಾತ್ಮ ವಿ ।

ನೋದ ಮನುಜಕಾಯ ನಾರಾಯಣವರ ।
ಬೋಧಮುದ್ರಹಸ್ತಾ ಶಶಿವರ್ಣಸಂಕಾಶ ।
ಆದಿತ್ಯವಂದಿತ ವಿಜಯವಿಠ್ಠಲರೇಯಾ ।
ವೈಧಾತೃಸೇವ್ಯ ನಿರಾಕುಲ ಕಪಿಲ ॥ ೪ ॥

**ಆದಿತಾಳ**

ಅರುಣೋದಯದಲೆದ್ದು ಕರಣ ಶುದ್ಧಿಯಿಂದ ।
ಗುರು ಕಪಿಲ ಕಪಿಲನೆಂದು ಸ್ಮರಿಸಿದ ಮಾನವಗೆ ।
ನಿರುತ ಮಾಡಿದ ಮಹತ್ತರಕರ್ಮಬಂಧ ।
ಪರಿಹರವಾಗಿ ಪೋಗುವದು ಪರಮಜ್ಞಾನಿಯಾಹ ।
ಪರಿಮಾಣಕ್ಕೆ ತನ್ನ ಕುರುಹು ।
ತೋರಿಸಿ ಯಮನ ಬಾಧೆ ತಪ್ಪಿಸುವನು ।
ನಿರಯವಿದೂರ ಮನುಪೌತ್ರ ವಿಜಯವಿಟ್ಠಲ ।
ಪೊರೆವ ಪ್ರಪನ್ನಜನರ ಹೃದಯದೊಳಗೆ ನಿಂದು ॥ ೫ ॥

**ಜತೆ**

ಕಪಿಲ ಕಪಿಲ ದೇವ ದೇಶಕಾಲತಃ ಪೂರ್ಣ ।
ದ್ರುಪದ ನಂದನೆ ವರದ ವಿಜಯವಿಠ್ಠಲಮೂರ್ತಿ ॥ ೬ ॥

---

ಸಿದ್ಧಾನಾಂ ಕಪಿಲೋ ಮುನಿಃ - ಭ.ಗೀ.೧೦-೨೬

ಸುಖರೂಪಃ, ಪಾಲ್ಯತೇ, ಲೀಯತೇ ಚ ಜಗದನೇನ ಇತಿ ಕಪಿಲಃ ।
ಋಷಿಂ ಪ್ರಸೂತಂ ಕಪಿಲಂ ಯಸ್ತಮಗ್ರೇ
ಜ್ಞಾನೈರ್ಬಿಭರ್ತಿ ಜಾಯಮಾನಂ ಚ ಪಶ್ಯೇತ್ ।
ಸುಖಾದನಂತಾತ್ ಪಾಲನಾತ್ ಲೀಯನಾಚ್ಚ
ಯಂ ವೈ ದೇವಂ ಕಪಿಲಮುದಾಹರಂತಿ ॥
ಇತಿ ಬಾಭ್ರವ್ಯಶಾಖಾಯಾಮ್ ॥ ಗೀ.ಭಾ. ೧೦-೨೬

# ಕಪಿಲಾವತಾರ ಸುಳಾದಿ - 2

ಧ್ರುವತಾಳ

ಸಿದ್ಧಿದಾಯಕ ಶಿಷ್ಯಜನ ಪರಿಪಾಲ ಪರಮ।
ಶುದ್ಧಾತ್ಮಸುಗುಣಸಾಂದ್ರ ಸುಖವಾರಿಧಿ।
ನಿದ್ರಾರಹಿತ ಭದ್ರಾರಮಣ ನಿರ್ವಿಕಾರ।
ಚಿದ್ದೇಹ ಸರ್ವಕಾಲ ಸುಂದರಸಾರ।
ಪದ್ಮಸಂಭವ ಬಲಿ ಪ್ರಕ್ಷಾಳಿತ ಪಾದ ಮಹಾ।
ಹೃದ್ರೋಗನಾಶ ವೈಕುಂಠವಾಸ।
ವಿದ್ಯಾತೀತ ವಿಶ್ವನಾಟಕ ನಾರಾಯಣ।
ವಿದ್ಯ ಉದ್ಧಾರಕ ಉದಧಿಸದನಾ।
ಸಿದ್ಧಾದಿ ವಿನುತ ಸಂತತ ಪಾತಾಳವಾಸಿ।
ಬುದ್ಧಿವಿಶಾಲ ಮಹಿಮ ಪಾಪಹಾರಿ।
ಖದ್ಯೋತವರ್ಣ ಸಕಲವ್ಯಾಪ್ತಆಕಾಶ ಅಮಿತ।
ಬದ್ಧವಿಚ್ಛೇದ ನಾನಾರೂಪಾತ್ಮಕಾ।
ಅದ್ವೈತಕಾಯ ಮಾಯಾರಮಣ ರಾಜೀವನೇತ್ರಾ।
ಅದ್ವಯ ಅನಾದಿ ಪುರುಷಚಿತ್ರ।
ಕರ್ದಮ ಮುನಿಸೂನು ವಿಜಯವಿಠ್ಠಲ ಕಪಿಲ।
ನಿರ್ದೋಷ ಕರುಣಾಬ್ಧಿಸರ್ವರಾಧಾರಿ ॥ 1 ॥

ಮಟ್ಟತಾಳ

ಆದಿ ಮನ್ವಂತರದಿ ಜನಿಸಿದ ಮಹದ್ದೈವ।
ಆದಿ ಪರಬೊಮ್ಮಬೊಮ್ಮನಯ್ಯಾ ಜೀಯಾ।
ಸಾಧು ಜನರ ಪ್ರಿಯಾ ಸಂತತ ಮುನಿತಿಲಕಾ।
ಬೋಧ ಶರೀರ ಭಕುತರಮನೋಹರ ಹರಿ।

ಮಾಧವ ಸಿರಿ ವಿಜಯವಿಠ್ಠಲ ವಿಮಲೇಶಾ।
ಮೋದಮತಿ ಕೊಡುವ ಕಪಿಲ ಭಗವನ್ಮೂರ್ತಿ ॥ 2 ॥

**ತ್ರಿವಿಡಿತಾಳ**

ಘನಮಹಿಮಾ ಗೌಣಾಂಡದೊಳಗೆ ಲೀಲೆಯಿಂದ।
ಜನಿಸಿ ಮೆರೆದೆ ಬಿಂದು ಸರೋವರದಲ್ಲಿ।
ಮಿನುಗುವ ದ್ವಯಹಸ್ತ ಅಪ್ರಾಕೃತ ಕಾಯ।
ಇನನಂತೆ ಒಪ್ಪುವ ಶಿರೋರುಹವೋ।
ಕನಕ ಪುತ್ಥಳಿಯಂತೆ ಕಾಂತಿ ತ್ರಿಭುವನಕ್ಕೆ।
ಅನವರತ ತುಂಬಿ ಸೂಸುತಲಿದಕೋ।
ಜನನಿ ದೇವಹೂತಿಗೆ ಉಪದೇಶವನು ಮಾಡಿ।
ಗುಣ ಮೊದಲಾದ ತತ್ವವ ತಿಳಿಸಿದೆ।
ತನುವಿನೊಳಗೆ ನೀನೆ ತಿಳಿದು ತಿಳಿದೆ ನಿತ್ಯ।
ಜನರನ್ನು ಪಾಲಿಸುವ ಕಪಿಲಾಖ್ಯನೆ।
ಅನುದಿನ ನಿನ್ನ ಧ್ಯಾನವ ಮಾಡಿ ಮಣಿಯಿಂದ।
ಎಣಿಸುವ ಸುಜನಕ್ಕೆ ಜ್ಞಾನ ಕೊಡುವ।
ಎಣೆಗಾಣೆ ನಿನ್ನಾಲೋಚನದ ಶಕ್ತಿಗೆ ಸಗರ।
ಜನಪ ನಂದನರನ್ನು ಭಂಗಿಸಿದೆ।
ಅನುಮಾನವಿದಕಿಲ್ಲ ನಿನ್ನ ನಂಬಿದ ಮೂಢ।
ಮನುಜನಿಗೆ ಮಹಾಪದವಿ ಬರುವುದೈಯ್ಯ।
ಮುನಿಕುಲೋತ್ತಮ ಕಪಿಲ ವಿಜಯವಿಠ್ಠಲರೇಯ।
ಎನಗೆ ಯೋಗ ಮಾರ್ಗವ ತೋರು ತವಕದಿಂದ ॥ 3 ॥

**ಅಟ್ಟತಾಳ**

ಕಪಿಲ ಕಪಿಲಯೆಂದು ಪ್ರಾತಃಕಾಲದಲೆದ್ದು।

ಸಪುತ ಸಾರಿಗೆಲಿ ನುಡಿದ ಮಾನವನಿಗೆ।
ಅಪಜಯ ಮೊದಲಾದ ಕ್ಲೇಶಗಳೊಂದಿಲ್ಲಾ।
ಅಪರಿಮಿತ ಸೌಖ್ಯ ಅವನ ಕುಲಕೋಟಿಗೆ।
ಗುಪುತ ನಾಮವಿದು ಮನದೊಳಗಿಡುವದು।
ಕಪಟ ಜೀವರು ಈತನು ಒಬ್ಬ ಋಷಿ ಎಂದು ಪರಿ।
ತಪಿಸುವರು ಕಾಣೊ ನಿತ್ಯ ನರಕದಲ್ಲಿ।
ಕೃಪಣವತ್ಸಲ ನಮ್ಮ ವಿಜಯವಿಠ್ಠಲರೇಯಾ।
ಕಪಿಲಾವತಾರನು ಬಲ್ಲವಗೆ ಬಲು ಸುಲಭ ॥ 4 ॥

**ಆದಿತಾಳ**

ಬಲ ಹಸ್ತದಲ್ಲಿ ಯಜ್ಞಶಾಲೆಯಲ್ಲಿ ಕಂ।
ಗಳ ಕಪ್ಪಿನಲ್ಲಿ ಹೃದಯ ಸ್ಥಾನ ನಾಭಿಯಲ್ಲಿ।
ಜಲಧಿ ಗಂಗಾ ಸಂಗಮದಲ್ಲಿ ಗಮನದಲ್ಲಿ।
ತುಲಸಿಪತ್ರದಲ್ಲಿ ತುರಗ ತುರುವಿನಲ್ಲಿ।
ಮಲಗುವ ಮನೆಯಲ್ಲಿ ನೈವೇದ್ಯ ಸಮಯದಲ್ಲಿ।
ಬಲುಕರ್ಮ ಬಂಧಗಳು ಮೋಚಕವಾಗುವಲ್ಲಿ।
ಚೆಲುವನಾದವನಲ್ಲಿ ವಿದ್ಯ ಪೇಳುವನಲ್ಲಿ।
ಫಲದಲ್ಲಿ ಪ್ರತಿಕೂಲ ಇಲ್ಲದ ಸ್ಥಳದಲ್ಲಿ।
ಬೆಳೆದ ದರ್ಭೆಗಳಲ್ಲಿ ಅಗ್ನಿಯಲ್ಲಿ ಹರಿವ।
ಜಲದಲ್ಲಿ ಜಾಂಬುನದ ನದಿಯಲ್ಲಿ ಶ್ಲೋಕದಲ್ಲಿ।
ವಲಿಮುಖ ಬಳಗದಲ್ಲಿ ಆಚಾರ ಶೀಲನಲ್ಲಿ।
ಘಳಿಗೆ ಆರಂಭದಲ್ಲಿ ಪಶ್ಚಿಮ ಭಾಗದಲ್ಲಿ।
ಪೊಳೆವ ಮಿಂಚಿನಲ್ಲಿ ಬಂಗಾರದಲ್ಲಿ ಇನಿತು।
ಕಾಲ ಕಾಲಕ್ಕೆ ಬಿಡದೆ ಸ್ಮರಿಸು ಕಪಿಲ ಪರಮಾತ್ಮನ್ನ।
ಗೆಲುವುಂಟು ನಿನಗೆಲವೋ ಸಂಸಾರದಿಂದ ವೇಗ।

ಕಲಿಯುಗದೊಳಗಿದೆ ಕೊಂಡಾಡಿದವರಿಗೆ ।
ಖಳರ ಅಂಜಿಕೆಯಿಲ್ಲ ನಿಂದಲ್ಲಿ ಶುಭಯೋಗ ।
ಬಲವೈರಿನುತ ನಮ್ಮ ವಿಜಯವಿಠ್ಠಲರೇಯಾ ।
ಇಳೆಯೊಳಗೆ ಕಪಿಲಾವತಾರನಾಗಿ ನಮ್ಮ ಭಾರವಹಿಸುವಾ ॥ 5 ॥

ಜತೆ

ತಮ ಪರಿಚ್ಛೇದ ಈತನ ಸ್ಮರಣೆ ನೋಡು ಹೃ ।
ತ್ಕಮಲ ದೊಳಗೆ ವಿಜಯವಿಠ್ಠಲನ್ನಚರಣಾಬ್ಜಾ ॥ 6 ॥

ರಾಗ-ಕಾಂಬೋಧಿ ಝಂಪೆತಾಳ

ಆವ ರೋಗವು ಎನಗೆ ದೇವ ಧನ್ವಂತ್ರಿ ।
ಸಾವಧಾನದಿ ಎನ್ನ ಕೈ ಪಿಡಿದು ನೋಡಯ್ಯ ॥ ಪಲ್ಲ ॥
ಹರಿಮೂರ್ತಿಗಳು ಎನ್ನ ಕಂಗಳಿಗೆ ಕಾಣಿಸವು ।
ಹರಿಯ ಕೀರ್ತನೆಯು ಕೇಳಿಸದೆನ್ನ ಕಿವಿಗೆ ।
ಹರಿಮಂತ್ರಸ್ತೋತ್ರ ಬಾರದು ಎನ್ನ ನಾಲಿಗೆಗೆ ।
ಹರಿಪ್ರಸಾದ ಜಿಹ್ವೆಗೆ ಸವಿಯಾಗದಯ್ಯ ॥ ೧ ॥
ಹರಿಪಾದ ಸೇವೆಗೆನ್ನ ಹಸ್ತಗಳು ಚಲಿಸವು ।
ಗುರುಹಿರಿಯರಂಘ್ರಿಗೆ ಶಿರ ಬಾಗದು ॥
ಹರಿಯ ನಿರ್ಮಾಲ್ಯವಾಘ್ರಾಣಿಸದು ನಾಸಿಕವು ।
ಹರಿಯಾತ್ರೆಗಳಿಗೆನ್ನ ಕಾಲೇಳವಯ್ಯ ॥ ೨ ॥
ಅನಾಥಬಂಧು ಗೋಪಾಲ ವಿಠ್ಠಲರೇಯ ।
ಎನ್ನ ಭಾಗದ ವೈದ್ಯ ನೀನೆಯಾದಿ ॥
ಅನಾದಿ ಕಾಲದ ಭವರೋಗ ಕಳೆಯಯ್ಯಾ ।
ನಾನೆಂದಿಗೂ ಮರೆಯೆ ನೀ ಮಾಡಿದುಪಕಾರ ॥ ೩ ॥

ರಾಗ-ಕಾಂಬೋಧಿ ಝಂಪೆತಾಳ

ಮನಸಿಗೆ ಬಂದ ಧನ್ವಂತ್ರಿ ವೈದ್ಯನೆ ದೇವ।
ಮನಸಿನ ರೋಗವ ಪರಿಹರಿಸೋ ತಂದೆ ॥ ಪಲ್ಲ॥
ಧನಲೇಶ ಕೇಳದೆ ಸುಜನರನು ಪೊರೆಯುವೆ ನೀ।
ಮನೆಗ ಬಂದರೆ ತನುವಿನಾ ರೋಗ ಓಡುವವು।
ನೆನಹ ಮಾರ್ಗಕೆ ಬೇಗ ತಡಿಯದೆ ಈ ಮನದ।
ಕುನರಸೂಲಿವುಳ್ಳ ವಾತವನು ಪರಿಹರಿಸೊ ॥ ೧ ॥
ನಾಮವ ನುಡಿವಲ್ಲಿ ಅರುಚಿ ಇರುವದು ನೋಡು।
ಭಾಮೆಯರ ಕಂಡರೆ ತಲ್ಲಣವಾಹುದೋ
ಶ್ರೀ ಮನೋಹರನ ಸ್ಮರಣೆ ಹಾರಿಹೋಗುತಲಿಹುದು।
ಈ ಮಹಾ ದೋಷದಾ ಪಿತ್ತವನು ಕಳೆಯೋ ॥ ೨ ॥
ಹಿರಿಯರನು ನೋಡಿದರೆ ಗುರು ಗುರು ಎನ್ನುತಿದೆ ಮನ।
ಪರಿಪರಿಯ ವಿಷಯದಾ ನಂಜಿನಿಂದಾ।
ಪರಿಹರಿಸೊ ಈ ಶ್ಲೇಷ್ಮ ಮೊರೆಹೊಕ್ಕೆ ನಾನಿನಗಯ್ಯ
ಸರಿಪಡಿಸೊ ಶ್ರೀ ವಾಸುದೇವ ವಿಠ್ಠಲರೇಯ ॥ ೩ ॥

ರಾಗ-ರೇಗುಪ್ತಿ ಝಂಪೆತಾಳ

ಎನ್ನ ಭಿನ್ನಪ ಕೇಳು ಧನ್ವಂತ್ರಿದಯಮಾಡೋ
ಸಣ್ಣವನು ಇವಕೇವಲ ॥ ಪಲ್ಲ॥
ಬನ್ನ ಬಡಿಸುವ ರೋಗವನ್ನು ಮೋಚನೆಮಾಡಿ।
ಚನ್ನಾಗಿ ಪಾಲಿಸುವದೋ ವಿಭುವೆ ॥ ಅ.ಪ. ॥
ಆರೋಗ್ಯ ಆಯುಷ್ಯ ಐಶ್ವರ್ಯವೆಂಬೊವಿವು ಮೂರು
ವಿಧವಸ್ತುಗಳು।
ನಾರಾಯಣನ ಭಜಕರಾದವರ ಸಾಧನಕೆ ಪೂರಣವಾಗಿಪ್ಪವೊ।

ಘೋರ ವ್ಯಭಿಚಾರ ಪರನಿಂದೆ ವಿತ್ತಪಹಾರ ಮಾಡಿದ ದೋಷದಿ।
ದಾರಿದ್ರರಾಗುವರೋ ಮೂರು ವಿಧದಿಂದಲಿ।
ಕಾರಣನೆ ನೀನು ದುಷ್ಕರ್ಮ ಪರಿಹರಿಸೋ ॥ ೧ ॥
ವಸುಮತಿಯ ಮೇಲಿನ್ನು ಅಸುರ ಜನರೇ ಬಹಳ।
ವಶವಲ್ಲ ಕಲಿಯ ಬಾಧೆ ॥
ಬಿಸಿಲಿಂದ ಪೀಡಿತವಾದ ಸಸಿಗಳಂತೆ। ಶಿಶುಗಳು ನಾವಿಪ್ಪೆವೋ ॥
ಅಸುರಾರಿ ನಿನ್ನ ಕರುಣಾಮೃತದ ಮಳೆಗರೆದು ಕುಶಲದಲಿ
ಪಾಲಿಸುವದೋ।
ಕೆಸರಿಂದ ಕೆಸರ ತೊಳೆದಂತೆ ಕರ್ಮದ ಫಲವು ಅಸುನಾಥ
ಹರಿಯೇ ಪೊರೆಯೊ ಸ್ವಾಮಿ ॥ ೨ ॥
ಆದಿವ್ಯಾಧಿಗಳು ಉನ್ಮಾದ ವಿಭ್ರಮ ನಾನಾ ಬಾಧೆಗೌಷಧನು ನೀನೆ।
ಹೇ ದೇವ ನಿನ್ನ ಕರಕಲಶ ಸುಧೆಯನು ಎರೆದು ಸಾಧುಗಳ
ಸಂತೈಸುವೆ ॥
ಮೋದ ಪಡಿಸುವಿ ನಿನ್ನ ಸಾಧಿಸುವರಿಗೆ ಶುಭೋದಯಂಗಳನು
ಮಾಡಿ।
ಆದರಿಸಿ ಇವಗೆ ತವ ಪಾದ ಧ್ಯಾನವನಿತ್ತು ಸಾಧುಗಳೊಳಗಿಟ್ಟು
ಮೋದಕೊಡು ಸರ್ವದಾ ॥ ೩ ॥
ಅನ್ಯರನು ಭಜಿಸದಲೆ ನಿನ್ನನೆ ತುತಿಸುತ್ತ ನಿನ್ನ ಚಿನ್ಹಗಳ ಧರಿಸಿ।
ನಿನ್ನವರವನೆನಿಸಿ ನಿನ್ನ ನಾಮೋಚ್ಚರಿಸಿ ನಿನ್ನಿಂದ ಉಪಜೀವಿಸಿ ॥
ಅನ್ನ ಆರೋಗ್ಯಕ್ಕೆ ಅಲ್ಪ ಜೀವಿಗಳಿಗೆ ಇನ್ನು ಆಲ್ಪರಿಯಬೇಕೆ।
ನಿನ್ನ ಸಂಕಲ್ಪ ಭಕ್ತರನು ಪೋಷಿಪನೆಂಬ ಘನ್ನ ಬಿರುದನ್ನು ಉಳಿಹೊ
ಸಲಹೊ ॥ ೪ ॥

ರಾಗ-ಸುರಟಿ ಆದಿತಾಳ

ಮೋಸ ಹೋದೆನಲ್ಲ ಸಕಲವು ವಾಸುದೇವ ಬಲ್ಲ
ಭಾಸುರಾಂಗ ಶ್ರೀವಾಸುಕಿಶಯನನ
ಸಾಸಿರ ನಾಮವ ಲೇಸಾಗಿ ಪಠಿಸದೆ ॥ ಪ ॥
ದುಷ್ಟ ಜನರ ಕೂಡಿ ಸಾನತಿ
ಭ್ರಷ್ಟನಾದೆ ನೋಡಿ
ಶ್ರೇಷ್ಠರೂಪ ಮುರ ಮುಷ್ಟಿಕ ವೈರಿಯ
ನಿಷ್ಠೆಯಿಂದ ನಾ ದೃಷ್ಟಿಸಿ ನೋಡದೆ ॥ ೧ ॥
ಕಾಯವು ಸ್ಥಿರವಲ್ಲ ಎನ್ನೊಳು
ಮಾಯೆ ತುಂಬಿತಲ್ಲ
ಪ್ರಾಯಮದದಿ ಪರಸ್ತ್ರೀಯರ ಕೂಡಾಡಿ
ಕಾಯಜಜನಕನ ಗಾಯನ ಮಾಡದೆ ॥ ೨ ॥
ಕಂಗಳಿಂದಲಿ ನೋಡೋ ದೇವ ನಿ
ನ್ನಂಗಸಂಗವ ನೀಡೋ
ಮಂಗಳಮಹಿಮ ಶ್ರೀರಂಗವಿಠಲ ಮುಂ
ದಂಗಬಾರದಂತೆ ನೀ ದಯ ಮಾಡೋ ॥ ೩ ॥

ರಾಗ-ಕಾಂಬೋಧಿ ಆದಿತಾಳ

ಚಿತ್ತಜನಯ್ಯನ ಚಿಂತಿಸು ಮನವೇ
ಹೊತ್ತು ಕಳೆಯದೆ ಸರ್ವೋತ್ತಮನ ನೆನೆ ಮನವೆ ॥ ಪ ॥
ಕಾಲನ ದೂತರು ನೂಲು ಹಗ್ಗವ ತಂದು
ಕಾಲುಕೈಗಳ ಕಟ್ಟಿ ಮ್ಯಾಲೆ ಕುಟ್ಟಿ
ಕಾಲಪಾಶದೊಳಿಟ್ಟು ಶೂಲದಿಂದಿರಿವಾಗ
ಪಾಲಿಸುವರುಂಟೆ ಜಾಲವ ಮಾಡದೆ ॥ ೧ ॥

ದಂಡಧರನ ಭಟರು ಚಂಡಕೋಪದಿ ಬಂದು
ಕೆಂಡದ ನದಿಯ ತಡಿಗೆ ಕೊಂಡೊಯ್ದು
ಖಂಡಖಂಡವ ಕಿತ್ತು ಕೆಂಡದೊಳಿಡುವಾಗ
ಹೆಂಡಿರು ಮಕ್ಕಳು ಬಂದು ಬಿಡಿಸಬಲ್ಲರೆ ಮರುಳೆ ॥ ೨ ॥
ಅಂಗಳಿಗೆ ದಬ್ಬಣಂಗಳ ಸೇರಿಸಿ ಎರಡು
ಕಂಗಳಿಗೆ ಸೀಸವ ಕಾಸಿ ಪೊಯ್ಯಲು
ತಂಗಿ ಅಕ್ಕ ಬಂದು ಭಂಗವ ಬಿಡಿಸುವರೆ
ಅಂಗವು ಸ್ಥಿರವಲ್ಲ ರಂಗವಿಠಲ ಬಲ್ಲ ॥ ೩ ॥

**ರಾಗ-ಧನ್ಯಾಸಿ** **ರೂಪಕತಾಳ**

ವ್ಯರ್ಥವಲ್ಲವೆ ಜನ್ಮ ವ್ಯರ್ಥವಲ್ಲವೆ ॥ ಪ ॥
ತೀರ್ಥಪಾದರ ಭಜಿಸಿ ಕೃತಾರ್ಥನಾಗದವನ ಜನ್ಮ ॥ ಅ.ಪ. ॥
ಅರುಣ ಉದಯದಲ್ಲಿ ಎದ್ದು ಸರಿತದಲಿ ಸ್ನಾನವ ಮಾಡಿ
ಅರಳುಮಲ್ಲಿಗೆ ಮಾಲೆ ಹರಿಯ ಚರಣಕರ್ಪಿಸದವನ ಜನ್ಮ ॥ ೧ ॥
ಒಂದು ಶಂಖ ಉದಕ ತಂದು ಚಂದದಿಂದ ಹರಿಗೆ ಎರೆದು
ಗಂಧ ಪುಷ್ಪದಿಂದ ಹರಿಯ ವಂದನೆ ಮಾಡದವನ ಜನ್ಮ ॥ ೨ ॥
ಮುಗುಳುತೆನೆಯಲೆಸವ ತುಳಸಿದಳವ ತಂದು ಪ್ರೇಮದಿಂದ
ಜಗನ್ಮಯಗೆ ಅರ್ಪಿಸಿ ಕರವ ಮುಗಿದು ಸ್ತುತಿಸದವನ ಜನ್ಮ ॥ ೩ ॥
ಭೋಗಿಶಯನನ ದಿನದಿ ಸಕಲ ಭೋಗಗಳನು ತಾನು ತೊರೆದು
ಭಾಗವತರ ಮ್ಯಾಳದಿಂದ ಜಾಗರಣೆ ಮಾಡದವನ ಜನ್ಮ ॥ ೪ ॥
ಜಂಗಮರೊಳಗಧಿಕವೆನಿಪ ಭಂಗುರ-ಮನುಷ್ಯದೇಹ ಪಡೆದು
ರಂಗವಿಠಲನೆನಿಪ ಪಶ್ಚಿಮರಂಗಗರ್ಪಿಸದವನ ಜನ್ಮ ॥ ೫ ॥

# ಆಯುರ್ಸೂಕ್ತಃ

## ಋಗ್ವೇದಸಂಹಿತಾ

ಭದ್ರಂ ಕರ್ಣೇಭಿಃ ಶೃಣುಯಾಮ ದೇವಾ ಭದ್ರಂ ಪಶ್ಯೇ-ಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಂ ಸಸ್ತನೂಭಿರ್ವ್ಯಶೇಮ ದೇವಹಿತಂ ಯದಾಯುಃ ॥ ೧ ॥ ಪುನಃ ಪುನರ್ಜಾಯಮಾನಾ ಪುರಾಣೀ ಸಮಾನಂ ವರ್ಣಮಭಿಶುಂಭಮಾನಾ । ಶ್ವಘ್ನೀವ ಕೃತ್ನುರ್ವಿಜ ಆಮಿನಾನಾ ಮರ್ತಸ್ಯ ದೇವೀ ಜರಯಂತ್ಯಾಯುಃ ॥ ೨ ॥ ದ್ರವಿಣೋದಾ ದ್ರವಿಣಸಸ್ತುರಸ್ಯ ದ್ರವಿಣೋದಾಃ ಸನರಸ್ಯ ಪ್ರಯಂಸತ್ । ದ್ರವಿಣೋದಾ ವೀರವತೀಮಿಷಂ ನೋ ದ್ರವಿಣೋದಾ ರಾಸತೇ ದೀರ್ಘಮಾಯುಃ ॥ ೩ ॥ ಉದೀರ್ಧ್ವಂ ಜೀವೋ ಅಸುರ್ನ ಆಗಾದಪಪ್ರಾಗಾತ್ತಮ ಆ ಜ್ಯೋತಿರೇತಿ । ಆರೈಕ್ಪಂಥಾಂ ಯಾತವೇ ಸೂರ್ಯಾಯಾಗನ್ಮ ಯತ್ರ ಪ್ರತಿರಂತ ಆಯುಃ ॥ ೪ ॥ ದಕ್ಷಿಣಾವತಾಮಿದಿಮಾನಿ ಚಿತ್ರಾ ದಕ್ಷಿಣಾವತಾಂ ದಿವಿ ಸೂರ್ಯಾಸಃ । ದಕ್ಷಿಣಾವಂತೋ ಅಮೃತಂ ಭಜಂತೇ ದಕ್ಷಿಣಾವಂತಃ ಪ್ರತಿರಂತ ಆಯುಃ ॥ ೫ ॥ ಇಮೇ ಭೋಜಾ ಅಂಗಿರಸೋ ವಿರೂಪಾ

ದಿವಸ್ಪುತ್ರಾಸೋ ಅಸುರಸ್ಯ ವೀರಾಃ । ವಿಶ್ವಾಮಿತ್ರಾಯ ದದತೋ ಮಘಾನಿ ಸಹಸ್ರಸಾವೇ ಪ್ರತಿರಂತ ಆಯುಃ ॥ ೬ ॥ ಯಥಾ ಹ ತ್ಯದ್ವಸವೋ ಗೌರ್ಯಂ ಚಿತ್ಪದಿ ಷಿತಾಮಮುಂಚತಾ ಯಜತ್ರಾಃ । ಏವೋ ಷ್ವ (ಅ)ಗ್ ಸ್ಮನ್ಮುಂಚತಾ ವ್ಯಂಹಃ ಪ್ರತಾರ್ಯಗ್ನೇ ಪ್ರತರಂ ನ ಆಯುಃ ॥ ೭ ॥ ಯಶಸ್ಕರಂ ಬಲವಂತಂ ಪ್ರಭುತ್ವಂ ತಮೇವ ರಾಜಾಧಿ ಪತಿರ್ಬಭೂವ । ಸಂಕೀರ್ಣನಾಗಾಶ್ವಪತಿರ್ನರಾಣಾಂ ಸುಮಂಗಲ್ಯಂ ಸತತಂ ದೀರ್ಘಮಾಯುಃ ॥೮॥ ಗೋಮಾಯುರದಾದಜಮಾ-ಯುರದಾತ್ಪೃಶ್ನಿರದಾದ್ಧರಿತೋ ನೋ ವಸೂನಿ । ಗವಾಂ ಮಂಡೂಕಾ ದದತಃ ಶತಾನಿ ಸಹಸ್ರಸಾವೇ ಪ್ರತಿರಂತ ಆಯುಃ ॥ ೯ ॥ ಇಂದ್ರಾವರುಣಾ ಸೌಮನಸಮದೃಪ್ತಂ ರಾಯಸ್ಪೋಷಂ ಯಜಮಾನೇಷು ಧತ್ತಮ್ । ಪ್ರಜಾಂ ಪುಷ್ಟಿಂ ಭೂತಿಮಸ್ಮಾಸು ಧತ್ತಂ ದೀರ್ಘಾಯುತ್ವಾಯ ಪ್ರತಿರತಂ ನ ಆಯುಃ ॥ ೧೦ ॥ ವೃಷ್ಟಿಂ ದಿವಃ ಶತಧಾರಃ ಪವಸ್ವ ಸಹಸ್ರಸಾ ವಾಜಯುರ್ದೇವವೀತೌ । ಸಂ ಸಿಂಧುಭಿಃ ಕಲಶೇ ವಾವಶಾನಃ ಸಮುಸ್ರಿಯಾಭಿಃ ಪ್ರತಿರನ್ನ ಆಯುಃ ॥ ೧೧ ॥ ಸವಿತಾ ಪಶ್ಚಾತ್ತಾತ್ಸವಿತಾ ಪುರಸ್ತಾತ್ಸವಿತೋತ್ತರಾತ್ತಾತ್ಸವಿತಾಧರಾತ್ತಾತ್। ಸವಿತಾ ನಃ ಸುವತು ಸರ್ವತಾತಿಂ ಸವಿತಾ ನೋ ರಾಸತಾಂ

ದೀರ್ಘಮಾಯುಃ ॥ ೧೨ ॥ ನವೋ ನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಮ್ । ಭಾಗಂ ದೇವೇಭ್ಯೋ ವಿದಧಾತ್ಯಾಯನ್ ಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ ॥ ೧೩ ॥ ವಿದ್ಯುನ್ನ ಯಾ ಪತಂತೀ ದವಿದ್ಯೋದ್ಭರಂತೀ ಮೇ ಅಪ್ಯಾ ಕಾಮ್ಯಾನಿ । ಜನಿಷ್ಟೋ ಅಪೋ ನರ್ಯಃ ಸುಜಾತಃ ಪ್ರೋರ್ವಶೀ ತಿರತ ದೀರ್ಘಮಾಯುಃ ॥ ೧೪ ॥ ಉಚ್ಚಾದಿವಿ ದಕ್ಷಿಣಾವಂತೋ ಅಸ್ಥುರ್ಯೇ ಅಶ್ವದಾಃ ಸಹತೇ ಸೂರ್ಯೇಣ । ಹಿರಣ್ಯದಾ ಅಮೃತತ್ವಂ ಭಜಂತೇ ವಾಸೋದಾಃ ಸೋಮ ಪ್ರತಿರಂತ ಆಯುಃ ॥ ೧೫ ॥

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

# ಅಪಮೃತ್ಯು ಪರಿಹರಿಸೋ

ಅಪಮೃತ್ಯು ಪರಿಹರಿಸೊ ಅನಿಲದೇವಾ ।
ಕೃಪಣ ವತ್ಸಲನೆ ಕಾಯ್ವರ ಕಾಣೆ ಜಗದೊಳಗೆ ॥ ಪ ॥
ನಿನಗಿನ್ನು ಸಮರಾದ ಅನಿಮಿತ್ತ ಬಾಂಧವರು ।
ಎನಗಿಲ್ಲವಾವ ಜನ್ಮದಲಿ ।
ಅನುದಿನವು ಎಮ್ಮನುದಾಸೀನ ಮಾಡುವುದು ।
ಅನುಚಿತವು ಜಗದಿ ಸಜ್ಜನ ಶಿಖಾಮಣಿಯೆ ॥ ೧ ॥
ಕರಣಮಾನಿಗಳು ನಿನ್ನ ಕಿಂಕರರು ಮೂಲೋಕ ।
ದೊರೆಯೆ ನಿನ್ನೊಳಗಿಪ್ಪ ಸರ್ವಕಾಲ ।
ಪರಿಸರನೆ ಈ ಭಾಗ್ಯ ದೊರೆತನಕೆ ಸರಿಯುಂಟೆ ।
ಗುರುವರಿಯ ನೀ ದಯಾಕರನೆಂದು ಮೊರೆ ಹೊಕ್ಕೆ ॥ ೨ ॥
ಭವರೋಗ ಮೋಚಕನೆ ಪವಮಾನರಾಯಾ ನಿ ।
ನ್ನವರನು ನಾನು ಮಾಧವಪ್ರಿಯನೇ ।
ಜವನ ಬಾಧೆಯ ಬಿಡಿಸು ಅವನಿಯೊಳು ಸುಜನರಿಗೆ ।
ದಿವಿಜಗಣ ಮಧ್ಯದಲಿ ಪ್ರವರ ನೀನಹುದಯ್ಯ ॥ ೩ ॥
ಜ್ಞಾನಾಯು ರೂಪಕನು ನೀನಹುದೋ ವಾಣಿ ಪಂ ।
ಚಾನನಾದ್ಯಮರರಿಗೆ ಪ್ರಾಣದೇವಾ ।
ದೀನವತ್ಸಲನೆಂದು ನಾ ನಿನ್ನ ಮೊರೆ ಹೊಕ್ಕೆ ।
ದಾನವಾರಣ್ಯ ಕೃಶಾನು ಸರ್ವದ ಎಮ್ಮ ॥ ೪ ॥
ಸಾಧನ ಶರೀರವಿದು ನೀ ದಯದಿ ಕೊಟ್ಟದ್ದು ।
ಸಾಧಾರಣವು ಅಲ್ಲ ಸಾಧುಪ್ರಿಯಾ ।
ವೇದವಾದೋದಿತ ಜಗನ್ನಾಥವಿಠಲನ ।
ಪಾದ ಭಕುತಿಯನಿತ್ತು ಮೋದ ಕೊಡು ಸತತ ॥ ೫ ॥

# ಮೃತ್ಯುನಿವಾರಣ ಮಂತ್ರಾಃ

ಅಪೈತು ಮೃತ್ಯುರಮೃತಂ ನ ಆಗನ್ವೈವಸ್ವತೋ ನೋ ಅಭಯಂ ಕೃಣೋತು । ಪರ್ಣಂ ವನಸ್ಪತೇರಿವಾಭಿನಶ್ಶೀಯತಾಗ್ಂ ರಯಿಸ್ಸಚತಾನ್ನಶ್ಶಚೀಪತಿಃ ॥ ಪರಂ ಮೃತ್ಯೋ ಅನುಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ । ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಗ್ಂ ರೀರಿಷೋ ಮೋತ ವೀರಾನ್ ॥ ವಾತಂ ಪ್ರಾಣಂ ಮನಸಾऽನ್ವಾರಭಾಮಹೇ ಪ್ರಜಾಪತಿಂ ಯೋ ಭುವನಸ್ಯ ಗೋಪಾಃ । ಸ ನೋ ಮೃತ್ಯೋಸ್ತ್ರಾಯತಾಂ ಪಾತ್ವಗ್ಂಹಸೋ ಜ್ಯೋಗ್ಜೀವಾ ಜರಾಮಶೀಮಹಿ । ಅಮುತ್ರಭೂಯಾದಧ ಯದ್ಯಮಸ್ಯ ಬೃಹಸ್ಪತೇ ಅಭಿಶಸ್ತೇರಮುಂಚಃ । ಪ್ರತ್ಯೌಹತಾಮಶ್ವಿನಾ ಮೃತ್ಯುಮಸ್ಮಾದ್ದೇವಾನಾಮಗ್ನೇ ಭಿಷಜಾ ಶಚೀಭಿಃ ॥ ಹರಿಗ್ಂ ಹರಂತಮನುಯಂತಿ ದೇವಾ ವಿಶ್ವಸ್ಯೇಶಾನಂ ವೃಷಭಂ ಮತೀನಾಮ್। ಬ್ರಹ್ಮಸರೂಪ ಮನುಮೇದಮಾಗಾದಯನಂ ಮಾ ವಿವರ್ಧೀರ್ವಿಕ್ರಮಸ್ವ॥ ಶಲ್ಕೈರಗ್ನಿಮಿಂಧಾನ ಉಭೌ ಲೋಕೌ ಸನೇಮಹಮ್ । ಉಭಯೋರ್ಲೋಕಯೋರ್ ಋಧ್ವಾತಿ ಮೃತ್ಯುಂ ತರಾಮ್ಯಹಮ್ ॥

ಮಾ ಛಿದೋ ಮೃತ್ಯೋ ಮಾ ವಧೀರ್ಮಾ ಮೇ ಬಲಂ ವಿವೃಹೋ ಮಾ ಪ್ರಮೋಷೀಃ । ಪ್ರಜಾಂ ಮಾ ಮೇ ರೀರಿಷ ಆಯುರುಗ್ರ ನೃಚಕ್ಷಸಂ ತ್ವಾ ಹವಿಷಾ ವಿಧೇಮ ॥ ಮಾ ನೋ ಮಹಾಂತಮುತ ಮಾ ನೋ ಅರ್ಭಕಂ ಮಾ ನ ಉಕ್ಷಂತಮುತಮಾನ ಉಕ್ಷಿತಮ್ । ಮಾ ನೋ ವಧೀಃ ಪಿತರಂ ಮೋತ ಮಾತರಂ ಪ್ರಿಯಾ ಮಾ ನಸ್ತನುವೋ ರುದ್ರ ರೀರಿಷಃ ॥ ಮಾ ನಸ್ತೋಕೇ ತನಯೇ ಮಾ ನ ಆಯುಷಿ ಮಾ ನೋ ಗೋಷು ಮಾ ನೋ ಅಶ್ವೇಷು ರೀರಿಷಃ । ವೀರಾನ್ಮಾ ನೋ ರುದ್ರ ಭಾಮಿತೋ ವಧೀರ್ಹವಿಷ್ಮಂತೋ ನಮಸಾ ವಿಧೇಮ ತೇ ॥

## ಅಧರ್ಮದಿಂದ ಆಯುಷ್ಯ ಹಾನಿ

**ಅಧರ್ಮಲೋಲುಪಾಃ ಸರ್ವೇ ತಥಾಽನ್ಯೇಷಾಂ ಚ ನಿಂದಕಾಃ |**
**ಅತಃ ಸ್ವಲ್ಪಾಯುಷಃ ಸರ್ವೇ ಭವಿಷ್ಯಂತಿ ಕಲೌಯುಗೇ ||**
**ಅಲ್ಪಾಯುಷ್ಟ್ವಾನ್ ಮನುಷ್ಯಾಣಾಂ ನ ವಿದ್ಯಾಗ್ರಹಣಂ ದ್ವಿಜಾಃ |**
**ವಿದ್ಯಾಗ್ರಹಣಶೂನ್ಯತ್ವಾದ್ ಅಧರ್ಮೋ ವರ್ತತೇ ಪುನಃ ||**

**-ನರಸಿಂಹ ಪುರಾಣ**

ಎಲ್ಲರೂ ಅಧರ್ಮದಲ್ಲಿ ಆಸಕ್ತರಾಗಿರುತ್ತಾರೆ. ಪರನಿಂದಾ ಪರಾಯಣರಾಗಿರುತ್ತಾರೆ. ಆದ್ದರಿಂದ ಕಲಿಯುಗದಲ್ಲಿ ಎಲ್ಲರೂ ಅಲ್ಪಾಯುಷಿಗಳಾಗುತ್ತಾರೆ. ಆಯುಷ್ಯವು ಅಲ್ಪವಾದುದರಿಂದ ದ್ವಿಜರು ತತ್ವಜ್ಞಾನ ಸಂಪಾದನೆ ಮಾಡುವುದಿಲ್ಲ. ಜ್ಞಾನವಿಲ್ಲದುದರಿಂದ ಅಧರ್ಮ ವೃದ್ಧಿಯಾಗುತ್ತದೆ.

## ಮಾನವ ಜನ್ಮ ದೊಡ್ಡದು

ಕೌಮಾರ ಆಚರೇತ್ ಪ್ರಾಜ್ಞಃ ಧರ್ಮಾನ್ ಭಾಗವತಾನಿಹ |
**ದುರ್ಲಭಂ ಮಾನುಷಂ ಜನ್ಮ ತದಪ್ಯಧ್ರುವಮರ್ಥದಮ್ ||**

**-ಭಾಗವತ**

ಬುದ್ಧಿವಂತನಾದವನು ಕುಮಾರವಯಸ್ಸಿನಲ್ಲಿಯೇ ಭಾಗವತ ಧರ್ಮಗಳನ್ನು ಅನುಷ್ಠಾನ ಮಾಡಬೇಕು. ಪುರುಷಾರ್ಥ ಸಾಧನವಾದುದು ಮನುಷ್ಯಜನ್ಮ ಒಂದೇ. ಅದು ಸಿಗುವುದು ದುರ್ಲಭ. ಸಿಕ್ಕರೂ ಶಾಶ್ವತವಲ್ಲ.

**ನಿದ್ರಯಾ ಹ್ರಿಯತೇ ನಕ್ತಂ ವ್ಯವಾಯೇನ ನವಂ ವಯಃ |**
**ದಿವಾ ಚಾರ್ಥೇಹಯಾ ರಾಜನ್ ಕುಟುಂಬಭರಣೇನ ವಾ ||**
**ದೇಹಾಪತ್ಯ ಕಳತ್ರಾದಿಷ್ವಾತ್ಮಸೈನ್ಯೇಷ್ವಸತ್ಸ್ವಪಿ |**
**ತೇಷು ಪ್ರಸಕ್ತೋ ನಿಧನಂ ಪಶ್ಯನ್ನಪಿ ನ ಪಶ್ಯತಿ ||**

**ತಸ್ಮಾದ್ ಭಾರತ ಸರ್ವಾತ್ಮಾ ಭಗವಾನ್ ಹರಿರೀಶ್ವರಃ।**
**ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯಶ್ಚೇಚ್ಛತಾಽಭಯಮ್ ॥**
**-ಭಾಗವತ ೨-೧-೩,೪,೫**

ರಾತ್ರಿ ಎಲ್ಲ ಸ್ತ್ರೀಸಂಗದಲ್ಲಿ ಕಳೆಯುತ್ತದೆ. ಹಗಲು ಧನಾರ್ಜನೆ, ಸಂಸಾರ ನಿರ್ವಹಣೆಯಲ್ಲಿ ಹೀಗೆ ವ್ಯರ್ಥವಾಗಿ ಯೌವನವನ್ನು ಕಳೆಯುತ್ತಾರೆ. ಶರೀರ ಹೆಂಡತಿ ಮಕ್ಕಳು ಮುಂತಾದ ದುಃಖಕಾರಣವಾದ ವಿಷಯಗಳಲ್ಲಿ ಅತ್ಯಾಸಕ್ತಿಯಿಂದ ಹಿಂದಿನವರು ಹಾಳಾದುದನ್ನು ಕಂಡೂ ಕೂಡ ತಾವೂ ಅದೇ ಆಸಕ್ತಿಯ ಅಪಾಯಕ್ಕೆ ಧುಮುಕುತ್ತಾರೆ, ತಿಳಿದೂ ತಿಳಿದು.

ಆದರಿಂದ ಭಗವಾನ್ ಹರಿಯೊಬ್ಬನನ್ನೇ ಮುಮುಕ್ಷು ಕೇಳಿ ತಿಳಿಯಬೇಕು. ಹೇಳಬೇಕು. ಸ್ಮರಿಸಬೇಕು. ಅವನೊಬ್ಬನೇ ಸಕಲಾಭೀಷ್ಟದಾಯಕ. ಸರ್ವೇಶ್ವರ.

**ಏತಾವಾನ್ ಸಾಂಖ್ಯಯೋಗಾಭ್ಯಾಂ ಸ್ವಧರ್ಮಪರಿನಿಷ್ಠಯಾ।**
**ಜನ್ಮಲಾಭಃ ಪರಃ ಪುಂಸಾಮಂತೇ ನಾರಾಯಣಸ್ಮೃತಿಃ ॥**

ಅವನ ಬಗ್ಗೆ ತತ್ವಜ್ಞಾನ ಯೋಗ ಧರ್ಮಾನುಷ್ಠಾನಗಳಿಂದ ಶ್ರವಣ ಮನನಾದಿಗಳನ್ನು ಸಾಧಿಸಿದಾಗಲೇ ಜನ್ಮ ಸಾರ್ಥಕ್ಯ. ಅದರಿಂದ ಅಂತ್ಯ ಕಾಲದಲ್ಲಿ ಹರಿಸ್ಮರಣೆ ಲಭ್ಯವಾಗುವುದು. ಅದೇ ದೊಡ್ಡ ಲಾಭ.

## 'ಮೋಹನವಿಠಲ' ಎಂಬ ಅಂಕಿತವನ್ನಿತ್ತು ಶ್ರೀ ವಿಜಯದಾಸರು ಶ್ರೀಮೋಹನವಿಠಲದಾಸರಿಗೆ ಆಶೀರ್ವದಿಸಿದ ಪದ

**ರಾಗ - ಕಾಂಬೋದಿ** **ಝಂಪೆತಾಳ**

ಚಿರಂಜೀವಿಯಾಗೆಲೋ ಚಿನ್ನ ನೀನು ।
ಪರಮಭಾಗವತರ ಪದಧೂಳಿ ಧರಿಸುತಲಿ ॥ ಪ ॥

ಜರಿಯಬ್ಯಾಡ ಹರಿಯ ಮರೆಯಬ್ಯಾಡೆಂದೆಂದು
ತಿರಿಯಬ್ಯಾಡ ಖಳರ ಮನೆಗೆ ಪೋಗಿ
ಒರೆಯಬ್ಯಾಡನ್ಯರಿಗೆ ತತ್ವಗಳ ರಹಸ್ಯ
ಬೆರೆಯಬ್ಯಾಡ ಅನ್ಯಸತಿಯ ಸ್ವಪ್ನದಲೂ ॥ 1 ॥

ಸಾಲಮಾಡಲಿಬ್ಯಾಡ ಸಾಲದೆನ್ನಲಿಬ್ಯಾಡ
ನಾಳಿಗೆ ಹ್ಯಾಂಗೆಂಬೊ ಚಿಂತೆಬ್ಯಾಡ
ಖೂಳಜನರೊಡನಾಡಿ ಕಂಗೆಡಲು ಬೇಡ ನೀ
ಬಾಳುವರ ಸಂಗಡ ಬಾಳೆಲವೊ ಬಾಳ ॥ 2 ॥

ಲೋಕವಾರ್ತೆಯು ನಿನ್ನ ಕಿವಿಗೆ ಕೇಳಿಸಬ್ಯಾಡ
ಶ್ರೀಕಾಂತನನೇಕಕೀರ್ತಿಯ ಕೇಳದಿರಬೇಡ
ಪಾಕವನು ಮಾಡಿ ಏಕಾಂತದಲಿ ಉಣಬೇಡ
ಭೂಕಾಂತರನುಸರಿಸಿ ಬೆಸಗೊಳಲುಬೇಡ ॥ 3 ॥

ಪಂಡಿತರು ಪಾಮರರು ಆರಾದರೂ ನಿನ್ನ
ಕಂಡವರಿಗೆಲ್ಲ ಕೌತುಕತೋರಲಿ
ಹೆಂಡರುಮಕ್ಕಳು ಅಳಿಯ ಸೊಸೆ ಮೊಮ್ಮಕ್ಕಳು
ಉಂಡುಟ್ಟು ದ್ವಿಜರ ಸಹ ಗಂಡುಗಲಿಯಾಗಿರೆಲೊ ॥ 4 ॥

ಮಂದಮತಿಗಳ ಕೂಡ ಮಾತನಾಡದಿರು ಹರಿ-
ನಿಂದಕರ ಕಣ್ಣೆತ್ತಿ ನೋಡಬ್ಯಾಡ
ಇಂದಿರೆಯರಸ ನಮ್ಮ ವಿಜಯವಿಟ್ಠಲನ ಪಾದ-
ದ್ವಂದ್ವ ಮಸ್ತಕತನಕ ನೋಡದಿರಬೇಡ ॥ 5 ॥

ಪರಮಪೂಜ್ಯ ಶ್ರೀ ಪೇಜಾವರ ಮಠಾಧೀಶ ಶ್ರೀ ಶ್ರೀ 108 ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು ಸಂಸ್ಥಾಪನೆಗೈದ ಅಖಿಲ ಭಾರತ ಮಾಧ್ವಮಹಾ ಮಂಡಲವು ಶಾಸ್ತ್ರಸಂರಕ್ಷಣೆ, ಗ್ರಂಥ ಪ್ರಕಾಶನ, ತತ್ವಜ್ಞಾನ ಪ್ರಸಾರ, ಧರ್ಮರಕ್ಷಣೆಯ ಘನ ಉದ್ದೇಶವನ್ನು ಹೊಂದಿದೆ. ಪುರುಸೊತ್ತಿಲ್ಲ ಎನ್ನುವ ಇಂದಿನ ಗಡಿಬಿಡಿಯ ಯಾಂತ್ರಿಕ ಜೀವನದಲ್ಲಿಯೂ ಸಂಕ್ಷೇಪವಾಗಿಯಾದರು ಜ್ಞಾನದ ಸಂಪಾದನೆಯಾಗಲೆಂದು ಕಿರುಹೊತ್ತಿಗೆಗಳ ಪ್ರಕಾಶನಕಾರ್ಯ ಕೈಗೊಂಡಿದೆ. ಅದರ ಅಂಗವಾಗಿ 'ದೀರ್ಘಾಯುಷ್ಯದ ರಹಸ್ಯ' ಎಂಬ ಪುಸ್ತಕ ಪ್ರಕಾಶನಗೊಳ್ಳುತ್ತಿದೆ.

ಶರೀರವು ಧರ್ಮಸಾಧನ. ಧರ್ಮಸಾಧನೆಯೊಂದಿಗೆ ಶರೀರ ಸ್ವಾಸ್ಥ್ಯ ಹಾಗೂ ಆಯುಷ್ಯದ ಸಂರಕ್ಷಣೆಯೂ ನಮ್ಮ ಕರ್ತವ್ಯವಾಗಿದೆ. ಆಯುಷ್ಯಕ್ಕೂ ನಮ್ಮ ಚಾರಿತ್ರ್ಯಕ್ಕೂ ಇರುವ ಘನಸಂಬಂಧವು ಮಹಾಭಾರತಾದಿ ಗ್ರಂಥಗಳಲ್ಲಿ ನಿರೂಪಿತವಾಗಿದೆ. ಅಪಮೃತ್ಯು ಪರಿಹಾರಕ ಸ್ತೋತ್ರ ಹೋಮ ಮಂತ್ರಜಪಗಳೊಂದಿಗೆ ಆಯುಷ್ಯವೃದ್ಧಿಕಾರಕ ವಿಧಿವಿಧಾನ ಹಾಗೂ ಜೀವನವಿಧಾನಗಳನ್ನೂ ಈ ಕೃತಿಯಲ್ಲಿ ಸಂಗ್ರಹಿಸಲಾಗಿದೆ.

ಈ ಗ್ರಂಥದ ರಚನೆಯನ್ನು ಖ್ಯಾತ ವಿದ್ವಾಂಸರೂ, ಪೂರ್ಣಪ್ರಜ್ಞ ವಿದ್ಯಾಪೀಠದ ಅಧ್ಯಾಪಕರೂ, ಹಾಗೂ ಪರಮಪೂಜ್ಯ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರಲ್ಲಿ ಶ್ರೀ ಶ್ರೀಮನ್ನ್ಯಾಯಸುಧಾದಿ ಗ್ರಂಥಗಳ ಅಧ್ಯಯನ ಮಾಡಿದವರೂ ಆದ ವಿದ್ವಾನ್ ರಾಮವಿಟ್ಠಲಾಚಾರ್ಯರು ಮಾಡಿರುತ್ತಾರೆ.